ಶ್ರೀವೀತರಾಗಾಯ ನಮಃ ।

ವಿದ್ವಚ್ಛಿರೋಮಣಿ, ಸ್ಯಾದ್ವಾದವಾರಿಧಿ, ವಾದಿಗಜಕೇಸರಿ,

ಪಂಡಿತ ಗೋಪಾಲದಾಸ ಬರಯ್ಯಾಕೃತ

# ಜೈನಸಿದ್ಧಾಂತಪ್ರವೇಶಿಕಾ.

ಇದನ್ನು

ಬೆಳಗಾವಿಯೊಳಗೆ ದೇವೇಂದ್ರ ಘಡಪ್ಪಾ ಚೌಗುಲೆ

ಇವರು ತಮ್ಮ

ಶ್ರೀಮಹಾವೀರ ಮುದ್ರಣಾಲಯದಲ್ಲಿ

ಮುದ್ರಿಸಿ ಅಲ್ಲೇ ಪ್ರಕಟಿಸಿದರು.

---

ಮಹಾವೀರ ಶಕೆ ೨೪೪೫.

ಸನ್ ೧೯೧೯.

---

ಲೆ ೧೨ ಆಣೆ.

ಓಂ.

# ಶ್ರೀಜೈನಸಿದ್ಧಾಂತಪ್ರವೇಶಿಕಾ.



ಇದನ್ನು
ಬೆಳಗಾವಿಯೊಳಗೆ ದೇವೇಂದ್ರ ಘಡೆಪ್ಪಾ ಚೌಗುಲೆ ಇವರು
ತಮ್ಮ "ಶ್ರೀಮಹಾವೀರ" ಮುದ್ರಣಾಲಯದಲ್ಲಿ
ಮುದ್ರಿಸಿ ಅಲ್ಲೇ ಪ್ರಕಟಿಸಿದರು.



ಶ್ರೀಮಹಾವೀರ ಶಕೆ ೨೪೪೫ ]        [ ಸನ್ನ ೧೯೧೯.

---

**ಕ್ರಯ ೧೨ ಆಣೆಗಳು.**

# ಪ್ರಸ್ತಾವನೆ.

'**ಶ್ರೀ ಜೈನಸಿದ್ಧಾಂತಪ್ರವೇಶಿಕಾ**' ಎಂಬ ಈ ಗ್ರಂಥವನ್ನು ಹಿಂದೀಭಾಷೆಯಲ್ಲಿ **ವಿದ್ವಚ್ಛಿರೋಮಣಿ-ಸ್ಯಾದ್ವಾದವಾರಿಧಿ ಪಂಡಿತ ಗೋಪಾಲದಾಸ ಬರೈಯ್ಯಾ** ಇವರು ಬರೆದದ್ದನ್ನು ಶ್ರೀಯುತ ಜೀವರಾಜ ಗೌತುಮಚಂದ ಸೊಲ್ಲಾಪೂರ ಇವರು ಮಹಾರಾಷ್ಟ್ರ ಭಾಷೆಯಲ್ಲಿ ಭಾಷಾಂತರಿಸಿದರು. ಹುಬ್ಬಳ್ಳಿ ಶ್ರೀ ಬಿದರೆ ಪಾಯಸಾಗರ (ನೇಮಿನಾಥ) ಸ್ವಾಮಿಯವರು ನನಗೆ ಪ್ರೋತ್ಸಾಹಿಸಿದ್ದರಿಂದ ಅದನ್ನೇ ನಾನು ಕನ್ನಡಿಗರ ಸಲುವಾಗಿ ಯಥಾಮತಿ ಕನ್ನಡಿಸಿದ್ದೇನೆ. ಈ ಗ್ರಂಥವನ್ನು ಅಚ್ಚುಹಾಕಿಸುವ ಭಾರವನ್ನು ಶ್ರೀ ಚಂದ್ರಸಾಗರವರ್ಣೀಯಸ್ವಾಮಿ ಎಡೆಹಳ್ಳಿ ಇವರು ವಹಿಸಿದ್ದು ಅವರಿಗೆ ಭೂಷಣವೇ ಸರಿ. ಈ ಉಭಯ ಸ್ವಾಮಿಗಳ ಈ ಕೃತಿಯು ಅವರ ಆಶ್ರಮಕ್ಕೆ ಒಪ್ಪತಕ್ಕಂಥಾದ್ದಿದ್ದು, ಉಳಿದವರು ಈ ಪ್ರಕಾರ ಗ್ರಂಥಪ್ರಕಟನೆಯನ್ನು ಮಾಡಿ ಧರ್ಮಪ್ರಭಾವನೆಯ ಕಾರ್ಯಕ್ಕೆ ಸಹಾಯಮಾಡಬೇಕೆಂದು ಪ್ರಾರ್ಥಿಸುತ್ತೇನೆ.

ಹುಬ್ಬಳಿ.
ತಾ॥೧-೫-೧೯.

ಭಾಷಾಂತರಕಾರ,
**ಅನಂತರಾವ ಮಂಟಗಣೀಕರ ಮಾಸ್ತರ**
ಆನರರಿ ಸುಪರಿಂಟೆಂಡೆಂಟ ಜೈನ ಬೋರ್ಡಿಂಗ
ಹುಬಳಿ.

॥ ಶ್ರೀವೀತರಾಗಾಯ ನಮಃ ॥

# ಶ್ರೀಜೈನಸಿದ್ಧಾಂತಪ್ರವೇಶಿಕಾ.



ನತ್ವಾ ಜಿನೇಂದ್ರಂ ಗತಸರ್ವದೋಷಂ ।
ಸರ್ವಜ್ಞದೇವಂ ಹಿತದೇಶಕಂ ಚ ॥
ಶ್ರೀಜೈನಸಿದ್ಧಾಂತಪ್ರವೇಶಿಕೇಯಂ ।
ವಿರಚ್ಯತೇ ಸ್ವಲ್ಪಧಿಯಾಂ ಹಿತಾಯ ॥ ೧ ॥

---

## ೧ನೆಯ ಅಧ್ಯಾಯ.



೧ ಪ್ರಶ್ನೆ—ಪದಾರ್ಥಗಳನ್ನು ತಿಳಿದುಕೊಳ್ಳುವ ವಿಧಗಳೆಷ್ಟು?

ಉತ್ತರ—ನಾಲ್ಕು. ಅವು:—೧ ಲಕ್ಷಣ, ೨ ಪ್ರಮಾಣ, ೩ ನಯ ಮತ್ತು ೪ ನಿಕ್ಷೇಪ.

೨ ಪ್ರ.—ಲಕ್ಷಣ ಅಂದರೇನು ?

ಉ.—ಒಂದೇ ಸ್ಥಳದಲ್ಲಿ ಕೂಡಿದ ಅನೇಕ ಪದಾರ್ಥಗಳೊಳಗಿಂದ ಯಾವದಾದರೊಂದೇ ಪದಾರ್ಥವನ್ನು ಬೇರೆ ಮಾಡುವ ಹೇತುವಿಗೆ ಲಕ್ಷಣ ಅನ್ನುವರು. ಉದಾ:—ಪ್ರಾಣಿಗಳ ಲಕ್ಷಣ ಚೈತನ್ಯ.

೩ ಪ್ರ.—ಲಕ್ಷಣದಲ್ಲಿ ಎಷ್ಟು ವಿಧಗಳು ?

ಉ.—ಎರಡು. ೧ ಆತ್ಮಭೂತ, ೨ ಅನಾತ್ಮಭೂತ.

೪ ಪ್ರ.—ಆತ್ಮಭೂತ ಲಕ್ಷಣ ಅಂದರೇನು ?

ಉ.—ಯಾವ ಲಕ್ಷಣವು ವಸ್ತುವಿನ ಸ್ವರೂಪದಲ್ಲಿಯೇ ಸೇರಿಕೊಂಡಿರುವದೋ, ಅದಕ್ಕೆ ಆತ್ಮಭೂತಲಕ್ಷಣ ಅನ್ನುವರು. ಉದಾ:—ಅಗ್ನಿಯ ಲಕ್ಷಣ ಉಷ್ಣತ್ವ.

೫ ಪ್ರ.—ಅನಾತ್ಮಭೂತಲಕ್ಷಣ ಅಂದರೇನು?

ಉ.—ಯಾವದು ವಸ್ತುವಿನ ಸ್ವರೂಪದಲ್ಲಿ ಕೂಡಿಕೊಂಡಿರುವದಿಲ್ಲವೋ, ಅದಕ್ಕೆ ಅನಾತ್ಮಭೂತಲಕ್ಷಣ ಅನ್ನುವರು. ಉದಾ:—ಕೋಲು ಹಿಡಿದ ಪುರುಷ. ಇದರಲ್ಲಿ 'ಕೋಲು' ಇದು ಅನಾತ್ಮಭೂತಲಕ್ಷಣವು.

೬ ಪ್ರ.—ಲಕ್ಷಣಾಭಾಸವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಲಕ್ಷಣದಲ್ಲಿ ದೋಷವಿರುವದೋ, ಅದಕ್ಕೆ ಲಕ್ಷಣಾಭಾಸವೆನ್ನುವರು.

೭ ಪ್ರ.—ಲಕ್ಷಣಕ್ಕೆ ಎಷ್ಟು ದೋಷಗಳಿರುವವು?

ಉ.—ಮೂರು. ಅವು:—೧ ಅವ್ಯಾಪ್ತಿ, ೨ ಅತಿವ್ಯಾಪ್ತಿ ಮತ್ತು ೩ ಅಸಂಭವಿ.

೮. ಪ್ರ– ಲಕ್ಷ್ಯ ಅಂದರೇನು ?

ಉ.—ಯಾವದರ ಲಕ್ಷಣವು ಮಾಡಲ್ಪಡುದೋ, ಅದಕ್ಕೆ ಲಕ್ಷ್ಯ ಅನ್ನುವರು. ಅಥವಾ ಲಕ್ಷಣದಿಂದ ವರ್ಣಿಸಲ್ಪಡುವದೇ ಲಕ್ಷ್ಯವು.

೯ ಪ್ರ.—ಅವ್ಯಾಪ್ತಿದೋಷದ ಸ್ವರೂಪ ಯಾವದು ?

ಉ.—ಲಕ್ಷ್ಯದ ಒಂದು ಭಾಗದಲ್ಲಿ ವ್ಯಾಪಿಸಿಕೊಂಡಿರುವ ಲಕ್ಷಣಕ್ಕೆ ಅವ್ಯಾಪ್ತಿದೋಷ ಅಥವಾ ಅವ್ಯಾಪ್ತಿ ಲಕ್ಷಣಾಭಾಸ ಅನ್ನುವರು. ಉದಾ:—ಪಶುವಿನ ಲಕ್ಷಣ ಶೃಂಗ ( ಕೋಡು ).

೧೦ ಪ್ರ.—ಅತಿವ್ಯಾಪ್ತಿದೋಷವೆಂದು ಯಾತಕ್ಕೆ ಅನ್ನುವರು ?

ಉ.—ಲಕ್ಷ್ಯ ಮತ್ತು ಅಲಕ್ಷ್ಯ ಇವೆರಡರಲ್ಲಿಯೂ ಇರುವ ಲಕ್ಷಣಕ್ಕೆ ಅತಿವ್ಯಾಪ್ತಿದೋಷ ಅನ್ನುವರು. ಉದಾ:—ಆಕಳ ಲಕ್ಷಣ ಶೃಂಗ ( ಕೋಡು ).

೧೧ ಪ್ರ.—ಅಲಕ್ಷ್ಯವೆಂದು ಯಾತಕ್ಕೆ ಅನ್ನಬೇಕು ?

ಉ.—ಲಕ್ಷ್ಯಗಳನ್ನುಳಿದು, ಬೇರೆ ಪದಾರ್ಥಗಳಿಗೆಲ್ಲ ಅಲಕ್ಷ್ಯ ಅನ್ನಬೇಕು.

೧೨ ಪ್ರ.—ಅಸಂಭವಿದೋಷದ ಸ್ವರೂಪ ಯಾವದು ?

ಉ.—ಲಕ್ಷ್ಯಯು ಲಕ್ಷಣದ ಅಸಂಭವ ( ಅಭಾವ ) ಇರುವ ದಾದರೆ, ಅದಕ್ಕೆ ಅಸಂಭವಿದೋಷ ಅನ್ನುವರು.

೧೩ ಪ್ರ.—ಪ್ರಮಾಣ ಅಂದರೇನು ?

ಉ.—ನಿಜವಾದ ಜ್ಞಾನಕ್ಕೆ ಪ್ರಮಾಣ ಅನ್ನುವರು.

೧೪ ಪ್ರ.—ಪ್ರಮಾಣದಲ್ಲಿ ಎಷ್ಟು ವಿಧವು ?

ಉ.—ಎರಡು. ೧ ಪ್ರತ್ಯಕ್ಷ, ೨ ಪರೋಕ್ಷ.

೧೫ ಪ್ರ.—ಪ್ರತ್ಯಕ್ಷವೆಂದು ಯಾತಕ್ಕೆ ಅನ್ನಬೇಕು ?

ಉ.—ಯಾವದು ಪದಾರ್ಥಗಳನ್ನು ಸ್ಪಷ್ಟವಾಗಿ ತಿಳಿಯುತ್ತದೋ ಅದಕ್ಕೆ ಪ್ರತ್ಯಕ್ಷ ಅನ್ನಬೇಕು.

೧೬ ಪ್ರ.—ಪ್ರತ್ಯಕ್ಷದಲ್ಲಿ ಎಷ್ಟು ಭೇದಗಳುಂಟು ?

ಉ.—ಎರಡು. ೧ ಸಾಂವ್ಯವಹಾರಿಕ ಪ್ರತ್ಯಕ್ಷ, ೨ ಪಾರಮಾರ್ಥಿಕ ಪ್ರತ್ಯಕ್ಷ.

೧೭ ಪ್ರ.—ಸಾಂವ್ಯವಹಾರಿಕ ಪ್ರತಕ್ಷ ಅಂದರೇನು ?

ಉ.—ಇಂದ್ರಿಯ ಮತ್ತು ಮನ ಇವುಗಳ ಸಹಾಯದಿಂದ ಪದಾರ್ಥದ ಒಂದು ಅಂಶವನ್ನು ಸ್ಪಷ್ಟವಾಗಿ ಯಾವದು ತಿಳಿಯುತ್ತದೋ, ಅದಕ್ಕೆ ಸಾಂವ್ಯವಹಾರಿಕ ಪ್ರತ್ಯಕ್ಷ ಅನ್ನುವರು.

೧೮ ಪ್ರ.—ಪಾರಮಾರ್ಥಿಕ ಪ್ರತ್ಯಕ್ಷ ಅಂದರೇನು ?

ಉ.—ಯಾವತರದ ಸಹಾಯುವಿಲ್ಲದೆ, ಪದಾರ್ಥಗಳನ್ನು ಸ್ಪಷ್ಟವಾಗಿ ಯಾವದು ತಿಳಿಯುವದು, ಅದು ಪಾರಮಾರ್ಥಿಕ ಪ್ರತ್ಯಕ್ಷವು.

೧೯ ಪ್ರ.—ಪಾರಮಾರ್ಥಿಕ ಪ್ರತ್ಯಕ್ಷದಲ್ಲಿ ಎಷ್ಟು ವಿಧಗಳುಂಟು?

ಉ.—ಎರಡು. ೧ ವಿಕಲಪಾರಮಾರ್ಥಿಕ, ೨ ಸಕಲಪಾರಮಾರ್ಥಿಕ.

೨೦ ಪ್ರ.—ವಿಕಲಪಾರಮಾರ್ಥಿಕ ಪ್ರತ್ಯಕ್ಷದ ಲಕ್ಷಣ ಯಾವದು?

ಉ.—ರೂಪವುಳ್ಳ ಪದಾರ್ಥಗಳನ್ನು ಯಾವ ಸಾಧನದ ಸಹಾವಿಲ್ಲದೆ, ಸ್ಪಷ್ಟವಾಗಿ ಯಾವದು ತಿಳಿಯುತ್ತದೋ, ಅದು ವಿಕಲಪಾರಮಾರ್ಥಿಕ ಪ್ರತ್ಯಕ್ಷವು.

೨೧ ಪ್ರ.—ವಿಕಲಪಾರಮಾರ್ಥಿಕ ಪ್ರತ್ಯಕ್ಷದಲ್ಲಿ ಎಷ್ಟು ಭೇದಗಳುಂಟು?

ಉ.—ಎರಡು. ೧ ಅವಧಿಜ್ಞಾನ, ೨ ಮನಃಪರ್ಯಾಯಜ್ಞಾನ.

೨೨ ಪ್ರ.—ಅವಧಿಜ್ಞಾನ ಅಂದರೇನು?

ಉ.—ದ್ರವ್ಯಕ್ಷೇತ್ರಕಾಲಭಾವಗಳ ಕೆಲ ವಿಶಿಷ್ಟಮರ್ಯಾದೆಯುವರೆಗೆ ರೂಪೀ ಪದಾರ್ಥಗಳನ್ನು ಯಾವದು ಸ್ಪಷ್ಟವಾಗಿ ತಿಳಿಯುತ್ತದೋ, ಅದಕ್ಕೆ ಅವಧಿಜ್ಞಾನ ಅನ್ನುವರು.

೨೩ ಪ್ರ.—ಮನಃಪರ್ಯಯಜ್ಞಾನವೆಂದು ಯಾತಕ್ಕೆ ಅನ್ನುವರು?

ಉ.—ದ್ರವ್ಯಕ್ಷೇತ್ರಕಾಲಭಾವಗಳ ಕೆಲ ವಿಶಿಷ್ಟ ಮರ್ಯಾದೆಯಲ್ಲಿ ಎರಡನೆಯವರ ಮನಸ್ಸಿನಲ್ಲಿರುವ ರೂಪೀ ಪದಾರ್ಥಗಳನ್ನು ಯಾವದು ಸ್ಪಷ್ಟವಾಗಿ ತಿಳಿಯುತ್ತದೋ, ಅದಕ್ಕೆ ಮನಃಪರ್ಯಯಜ್ಞಾನ ಅನ್ನುವರು.

೨೪ ಪ್ರ.—ಸಕಲಪಾರಮಾರ್ಥಿಕ ಪ್ರತ್ಯಕ್ಷವೆಂದು ಯಾತಕ್ಕೆ ಅನ್ನುವರು?

ಉ.—ಕೇವಲಜ್ಞಾನಕ್ಕೆ ಸಕಲಪಾರಮಾರ್ಥಿಕ ಪ್ರತ್ಯಕ್ಷ ಅನ್ನುವರು.

೨೫ ಪ್ರ.—ಕೇವಲಜ್ಞಾನವೆಂದು ಯಾತಕ್ಕೆ ಅನ್ನುವರು?

ಉ.—ತ್ರಿಕಾಲದಲ್ಲಿಯೂ ಇರುವಂಥ ಸರ್ವ ಪದಾರ್ಥಗಳನ್ನೂ ಒಂದೇಕಾಲಕ್ಕೆ ಸ್ಪಷ್ಟರೀತಿಯಿಂದ ಯಾವದು ತಿಳಕೊಳ್ಳುವದೊ, ಅದಕ್ಕೆ ಕೇವಲಜ್ಞಾನ ಅನ್ನುವರು.

೨೬ ಪ್ರ.—ಪರೋಕ್ಷಪ್ರಮಾಣ ಯಾತಕ್ಕೆ ಅನ್ನುವರು?

ಉ.—ಯಾವದು ಪರಸಹಾಯದಿಂದ ಪದಾರ್ಥಗಳನ್ನು ಸ್ಪಷ್ಟವಾಗಿ ತಿಳಕೊಳ್ಳುವದೋ, ಅದಕ್ಕೆ ಪರೋಕ್ಷ ಪ್ರಮಾಣ ಅನ್ನುವರು.

೨೭ ಪ್ರ.—ಪರೋಕ್ಷಪ್ರಮಾಣದಲ್ಲಿ ಎಷ್ಟು ವಿಧಗಳು?

ಉ.—ಐದು. ಅವು:—೧ ಸ್ಮೃತಿ, ೨ ಪ್ರತ್ಯಭಿಜ್ಞಾನ, ೩ ತರ್ಕ, ೪ ಅನುಮಾನ ಮತ್ತು ೫ ಆಗಮ.

೨೮ ಪ್ರ.—ಸ್ಮೃತಿ ಅಂದರೇನು?

ಉ.—ಮೊದಲು ಅನುಭೋಗಿಸಿದ ಪದಾರ್ಥಗಳನ್ನು ನೆನಪುಮಾಡಿಕೊಳ್ಳುವದಕ್ಕೆ ಸ್ಮೃತಿ ಅನ್ನುವರು.

೨೯ ಪ್ರ.—ಪ್ರತ್ಯಭಿಜ್ಞಾನವೆಂದು ಯಾತಕ್ಕೆ ಅನ್ನುವರು?

ಉ.—ಸ್ಮೃತಿ ಮತ್ತು ಪ್ರತ್ಯಕ್ಷ ಇವುಗಳಿಗೆ ವಿಷಯಗಳಾಗಿದ್ದ ಪದಾರ್ಥಗಳಲ್ಲಿರುವ ಉಭಯಾತ್ಮಕ ಜ್ಞಾನಕ್ಕೆ ಪ್ರತ್ಯಭಿಜ್ಞಾನ ಅನ್ನುವರು. ಉದಾ:—ನಿನ್ನೆ ಯಾವನನ್ನು ನೋಡಿದ್ದೆನೋ, ಅವನೇ ಈ ಮನುಷ್ಯನು.

೩೦ ಪ್ರ.—ಪ್ರತ್ಯಭಿಜ್ಞಾನದಲ್ಲಿ ಎಷ್ಟು ವಿಧವು?

ಉ.—ಏಕತ್ವಪ್ರತ್ಯಭಿಜ್ಞಾನ, ಸಾದೃಶ್ಯಪ್ರತ್ಯಭಿಜ್ಞಾನ. ಇತ್ಯಾದಿ ಅನೇಕ ಭೇದಗಳುಂಟು.

೩೧ ಪ್ರ.—ಏಕತ್ವಪ್ರತ್ಯಭಿಜ್ಞಾನವೆಂದರೇನು?

ಉ.—ಸ್ಮೃತಿ ಮತ್ತು ಪ್ರತ್ಯಕ್ಷ ಇವುಗಳಿಗೆ ವಿಷಯವಾಗಿದ್ದಂಥ ಪದಾರ್ಥದಲ್ಲಿ ಐಕ್ಯವನ್ನು ತೋರಿಸುವ ಉಭಯಾತ್ಮಕಜ್ಞಾನಕ್ಕೆ ಏಕತ್ವಪ್ರತ್ಯಭಿಜ್ಞಾನ ಅನ್ನುವರು. ಉ:—ಯಾವನು ನಿನ್ನೆ ನೋಡಲ್ಪಟ್ಟಿದ್ದನೋ, ಅವನು ಇದೇ ಮನುಷ್ಯನು.

೩೨ ಪ್ರ.—ಸಾದೃಶ್ಯಪ್ರತ್ಯಭಿಜ್ಞಾನದ ಲಕ್ಷಣ ಯಾವದು?
ಉ.—ಸ್ಮೃತಿ ಮತ್ತು ಪ್ರತ್ಯಕ್ಷ ಇವುಗಳಿಗೆ ವಿಷಯವಾಗಿರುವ ಪದಾರ್ಥಗಳಲ್ಲಿ ಸಮತ್ವವನ್ನು ತೋರಿಸುವ ಉಭಯಾತ್ಮಕ ಜ್ಞಾನಕ್ಕೆ ಸಾದೃಶ್ಯಪ್ರತ್ಯಭಿಜ್ಞಾನ ಅನ್ನುವರು.

೩೩ ಪ್ರ.—ತರ್ಕ ಎಂದು ಯಾತಕ್ಕೆ ಅನ್ನುವರು?
ಉ.—ವ್ಯಾಪ್ತಿಜ್ಞಾನಕ್ಕೆ ತರ್ಕ ಅನ್ನುವರು.

೩೪ ಪ್ರ.—ವ್ಯಾಪ್ತಿ ಅಂದರೇನು?
ಉ.—ಅವಿನಾಭಾವಿಸಂಬಂಧಕ್ಕೆ ವ್ಯಾಪ್ತಿ ಅನ್ನುವರು.

೩೫ ಪ್ರ.—ಅವಿನಾಭಾವಿಸಂಬಂಧ ಅಂದರೇನು?
ಉ.—ಎಲ್ಲೆಲ್ಲಿ ಸಾಧನ (ಹೇತು) ಇರುವದೋ, ಅಲ್ಲಲ್ಲಿ ಸಾಧ್ಯದ ನಿಶ್ಚಯವಾಗುವದೂ, ಎಲ್ಲೆಲ್ಲಿ ಸಾಧ್ಯ ಇರುವದಿಲ್ಲವೋ, ಅಲ್ಲಲ್ಲಿ ಸಾಧನಗಳೂ ಇಲ್ಲದೆ ಇರುವದೂ, ಅವಿನಾಭಾವಿಸಂಬಂಧವೆನಿಸುವದು. ಉದಾ:—ಹೊಗೆ ಇರುವಲ್ಲೆಲ್ಲ ಅಗ್ನಿ ಇರುವದು, ಮತ್ತು ಅಗ್ನಿ ಇಲ್ಲದಲ್ಲೆಲ್ಲ ಹೊಗೆಯೂ ಇರುವದಿಲ್ಲ. ಈ ಪ್ರಕಾರದ ಸಂಬಂಧಕ್ಕೆ ವ್ಯಾಪ್ತಿ ಅನ್ನುವರು.

೩೬ ಪ್ರ.—ಸಾಧನ ಅಂದರೇನು?
ಉ.—ಯಾವದು ಸಾಧ್ಯದವಿನಾ ಇರಲಿಕ್ಕೆ ಸಮರ್ಥವಾಗುವದಿಲ್ಲವೋ, ಅದೇ ಸಾಧನವು. ಉ:—ಅಗ್ನಿಯ

ಸಾಧನವು ( ಹೇತು ) ಹೊಗೆಯು. ಯಾಕಂದರೆ, ಹೊಗೆ ಇಲ್ಲದೆ ಅಗ್ನಿಯು ಇರಲಾರದು.

೩೭ ಪ್ರ.—ಸಾಧ್ಯವೆಂದು ಯಾತಕ್ಕೆ ಅನ್ನುವರು?

ಉ.—ಇಷ್ಟ, ಅಬಾಧಿತ ಮತ್ತು ಅಸಿದ್ಧವಾಗಿ ಇರುವದೇ ಸಾಧ್ಯವು.

೩೮ ಪ್ರ.—ಇಷ್ಟ ಅಂದರೇನು?

ಉ.—ವಾದಿ ಪ್ರತಿವಾದಿಯರು ಯಾವದನ್ನು ಸಿದ್ಧಮಾಡಲಿಕ್ಕೆ ಇಚ್ಛಿಸುವರೋ, ಅದಕ್ಕೆ ಇಷ್ಟ ಅನ್ನುವರು.

೩೯ ಪ್ರ.—ಅಬಾಧಿತವೆಂದು ಯಾತಕ್ಕೆ ಅನ್ನುವರು?

ಉ.—ಯಾವದು ಬೇರೆ ಪ್ರಮಾಣಗಳಿಂದ ಬಾಧಿತವಾಗುವದಿಲ್ಲವೋ, ಅದಕ್ಕೆ ಅಬಾಧಿತ ಅನ್ನುವರು. ಉದಾ:—ಅಗ್ನಿಯಲ್ಲಿ ಶೈತ್ಯವನ್ನು ತಿಳಿಯುವದು ಪ್ರತ್ಯಕ್ಷ ವಿರುದ್ಧವಾಗಿರುವದರಿಂದ ಶೈತ್ಯವು ಸಾಧ್ಯವಾಗಲಾರದು.

೪೦ ಪ್ರ.—ಅಸಿದ್ಧವೆಂದು ಯಾತಕ್ಕೆ ಅನ್ನುವರು?

ಉ.—ಯಾವದು ಎರಡನೆಯ ಪ್ರಮಾಣಗಳಿಂದ ಸಿದ್ಧವಾಗುವದಿಲ್ಲ. ಅದಕ್ಕೆ ಅಥವಾ ಯಾವದರ ನಿಶ್ಚಯುವಾಗುವದಿಲ್ಲ, ಅದಕ್ಕೆ ಅಸಿದ್ಧ ಅನ್ನುವರು.

೪೧ ಪ್ರ.—ಅನುಮಾನ ಅಂದರೇನು?

ಉ.—ಸಾಧನದ ಮೇಲಿಂದ ಸಾಧ್ಯದ ಜ್ಞಾನವಾಗುವದಕ್ಕೆ ಅನುಮಾನ ಅನ್ನುವರು.

೪೨ ಪ್ರ.—ಹೇತ್ವಾಭಾಸವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಹೇತು ದೋಷಯುಕ್ತ ಇರುವದೋ, ಅದಕ್ಕೆ ಹೇತ್ವಾಭಾಸ ಅನ್ನುವರು.

೪೩ ಪ್ರ.—ಹೇತ್ವಾಭಾಸದಲ್ಲಿ ಭೇದಗಳೆಷ್ಟು?

ಉ.—ನಾಲ್ಕು. ಅವು:—೧ ಅಸಿದ್ಧ, ೨ ವಿರುದ್ಧ, ೩ ಅನೈಕಾಂತಿಕ (ವ್ಯಭಿಚಾರಿ) ಮತ್ತು ೪ ಅಕಿಂಚಿತ್ಕರ.

೪೪ ಪ್ರ.—ಅಸಿದ್ಧಹೇತ್ವಾಭಾಸದ ಲಕ್ಷಣ ಯಾವದು?

ಉ.—ಯಾವದರಲ್ಲಿ ಹೇತುವಿನದೇ ಅಭಾವ ಇರುವದೋ, ಅಥವಾ ಹೇತುವಿನ ಅಸ್ತಿತ್ವದ ಬಗ್ಗೆ ಸಂಶಯುವಿರುವದೋ, ಅದಕ್ಕೆ ಅಸಿದ್ಧಹೇತ್ವಾಭಾಸ ಅನ್ನುವರು. ಉದಾ:—"ಶಬ್ದ ನಿತ್ಯವದೆ, ಯಾಕೆಂದರೆ ಅದು ನೇತ್ರಕ್ಕೆ ವಿಷಯವಾಗಿರುವದು." "ಶಬ್ದ" ಇದು ಕರ್ಣಕ್ಕೆ ವಿಷಯುವಲ್ಲದೆ, ನೇತ್ರಕ್ಕಲ್ಲ. ಅದ್ದರಿಂದ ಮೇಲಿನ ವಾಕ್ಯದಲ್ಲಿ "ನೇತ್ರಕ್ಕೆ ವಿಷಯು" ಎಂಬ ಹೇತು ಅಸಿದ್ಧಹೇತ್ವಾಭಾಸವಾಯಿತು.

೪೫ ಪ್ರ.—ವಿರುದ್ಧಹೇತ್ವಾಭಾಸವೆಂದು ಯಾತಕ್ಕೆ ಅನ್ನುವರು?

ಉ.—ಸಾಧ್ಯಕ್ಕೆ ವಿರುದ್ಧವಾಗಿರುವ ಪದಾರ್ಥಗಳೊಡನೆ ಯಾವದರ ವ್ಯಾಪ್ತಿ ಇರುವದೋ, ಅದಕ್ಕೆ ವಿರುದ್ಧ ಹೇತ್ವಾಭಾಸ ಅನ್ನುವರು. ಉದಾ:—“ಶಬ್ದ ನಿತ್ಯವದೆ, ಯಾಕಂದರೆ ಅದು ಪರಿಣಾಮಿಯಾಗಿರುವದು.” ಪರಿಣಾಮಿಯ ವ್ಯಾಪ್ತಿಯು ಅನಿತ್ಯದೊಡನೆ ಇರುವದಲ್ಲದೆ ನಿತ್ಯಕ್ಕೆ ಇರುವದಿಲ್ಲ. ಆದ್ದರಿಂದ ಈ ಅನುಮಾನವುಳ್ಳ ಮೇಲಿನ ವಾಕ್ಯದಲ್ಲಿ ನಿತ್ಯತ್ವದ ಹೇತುವಾದ ‘ಪರಿಣಾಮಿ’ ಎಂಬದು ವಿರುದ್ಧಹೇತ್ವಾಭಾಸವು.

೬೬ ಪ್ರ.—ಅನೈಕಾಂತಿಕ (ವ್ಯಭಿಚಾರ) ಹೇತ್ವಾಭಾಸ ಅಂದರೇನು?

ಉ.—ಯಾವ ಹೇತು ಪಕ್ಷ, ಸಪಕ್ಷ ಮತ್ತು ವಿಪಕ್ಷ ಈ ಮೂರನ್ನೂ ವ್ಯಾಪಿಸಿಕೊಂಡಿರುವದೋ, ಅದಕ್ಕೆ ಅನೈಕಾಂತಿಕ ಹೇತ್ವಾಭಾಸ ಅನ್ನುವರು. ಉದಾ:—“ಈ ಮೂಲಿಯಲ್ಲಿ ಹೊಗೆ ಇರುವದು; ಯಾಕಂದರೆ, ಈ ಸ್ಥಳದಲ್ಲಿ ಅಗ್ನಿ ಇರುವದು.” ಈ ವಾಕ್ಯದಲ್ಲಿ ಅಗ್ನಿತ್ವವೆಂಬ ಹೇತು ಪಕ್ಷ, ಸಪಕ್ಷ, ವಿಪಕ್ಷ ಈ ಮೂರುಗಳಲ್ಲಿಯೂ ವ್ಯಾಪಿಸಿಕೊಂಡಿರುವದರಿಂದ ಅದಕ್ಕೆ ಅನೈಕಾಂತಿಕ ಹೇತ್ವಾಭಾಸ ಅನ್ನುವರು.

೪೭ ಪ್ರ.—ಪಕ್ಷ ಎಂದು ಯಾತಕ್ಕೆ ಅನ್ನುವರು?

ಉ.—ಯಾವದರಲ್ಲಿ ಸಾಧ್ಯದ ಅಸ್ತಿತ್ವದ ಬಗ್ಗೆ ಸಂಶಯುವಿರುವದೋ, ಅದಕ್ಕೆ ಪಕ್ಷ ಅನ್ನುವರು. ಉದಾ:— ಮೇಲಿನ ಉದಾಹರಣೆಯೊಳಗಿನ "ಮೂಲಿ" ಎಂಬದು ಪಕ್ಷವು.

೪೮ ಪ್ರ.—ಸಪಕ್ಷ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವದರಲ್ಲಿ ಸಾಧ್ಯದ ಅಸ್ತಿತ್ವದ ನಿಶ್ಚಯುವಾಗುವದೋ, ಅದಕ್ಕೆ ಸಪಕ್ಷ ಅನ್ನುವರು. ಉದಾ:— ಹೊಗೆಯು ಸಪಕ್ಷ-ಹಸೆ ಕಟ್ಟಿಗೆಯಿಂದ ಕೂಡಿದ ಅಗ್ನಿ.

೪೯ ಪ್ರ.—ವಿಪಕ್ಷದ ಲಕ್ಷಣವೇನು?

ಉ.—ಯಾವದರಲ್ಲಿ ಸಾಧ್ಯದ ಅಭಾವದ ಬಗ್ಗೆ ನಿಶ್ಚಯುವಾಗುವದೋ, ಅದಕ್ಕೆ ವಿಪಕ್ಷ ಅನ್ನುವರು. ಉದಾ:— ಅಗ್ನಿಯಿಂದ ಕಾದ ಕಬ್ಬಿಣದ ಗುಂಡು.

೫೦ ಪ್ರ.—ಅಕಿಂಚಿತ್ಕರಹೇತ್ವಾಭಾಸವೆಂದು ಯಾತಕ್ಕೆನ್ನುವರು?

ಉ.—ಯಾವ ಹೇತು ಯಾವದೇ ಕಾರ್ಯ (ಸಾಧ್ಯದ ಸಿದ್ಧಿ) ವನ್ನು ಮಾಡಲಿಕ್ಕೆ ಸಮರ್ಥವಾಗಿರುವದಿಲ್ಲವೋ, ಅದಕ್ಕೆ ಅಕಿಂಚಿತ್ಕರಹೇತ್ವಾಭಾಸ ಅನ್ನುತ್ತಾರೆ.

೫೧ ಪ್ರ.—ಅಕಿಂತ್ಕರಹೇತ್ವಾಭಾಸದಲ್ಲಿ ಭೇದಗಳೆಷ್ಟು?

ಉ.—ಎರಡು. ೧ ಸಿದ್ಧಸಾಧನ ಮತ್ತು ೨ ಬಾಧಿತವಿಷಯು.

೫೨ ಪ್ರ.—ಸಿದ್ಧಸಾಧನವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಹೇತುವಿನ ಸಾಧ್ಯವು ಸಿದ್ಧವಾಗಿರವದೋ, ಆ ಹೇತುವಿಗೆ ಸಿದ್ಧಸಾಧನ ಅನ್ನುವರು. ಉದಾ:—ಅಗ್ನಿ ಉಷ್ಣವಿರುವದು. ಯಾಕಂದರೆ ಸ್ಪರ್ಶನೇಂದ್ರಿಯದಿಂದ ಹಾಗೆಯೇ ಅನುಭವಕ್ಕೆ ಬರುತ್ತದೆ.

೫೩ ಪ್ರ.—ಬಾಧಿತವಿಷಯಹೇತ್ವಾಭಾಸವೆಂದು ಯಾತಕ್ಕೆ ಅನ್ನುವರು.

ಉ.—ಯಾವ ಹೇತುವಿನ ಸಾಧ್ಯದಲ್ಲಿ ಅನ್ಯಪ್ರಮಾಣಗಳಿಂದ ಬಾಧೆಬರುವದೋ, ಆ ಹೇತುವಿಗೆ ಬಾಧಿತವಿಷಯ ಅನ್ನುವರು.

೫೪ ಪ್ರ.—ಬಾಧಿತವಿಷಯ ಹೇತ್ವಾಭಾಸದಲ್ಲಿ ಭೇದಗಳೆಷ್ಟು?

ಉ.—ಪ್ರತ್ಯಕ್ಷಬಾಧಿತ, ಅನುಮಾನಬಾಧಿತ ಆಗಮಬಾಧಿತ, ಸ್ವವಚನಬಾಧಿತ ಇತ್ಯಾದಿ ಅನೇಕ ಭೇದಗಳಿರುವವು.

೫೫ ಪ್ರ.—ಪ್ರತ್ಯಕ್ಷಬಾಧಿತವೆಂದು ಯಾತಕ್ಕೆ ಅನ್ನುವರು?

ಉ.—ಸಾಧ್ಯದೊಳಗಿನ ಯಾವ ಹೇತುವಿಗೆ ಪ್ರತಕ್ಷ ಬಾಧೆ ಬರುವದೋ, ಅದಕ್ಕೆ ಪ್ರತ್ಯಕ್ಷಬಾಧಿತ ಅನ್ನುವರು. ಉದಾ:—"ಅಗ್ನಿಯಲ್ಲಿ ಶೈತ್ಯವಿರುವದು, ಯಾಕಂದರೆ ಅದು ದ್ರವ್ಯವಿರುವದು" ಇಲ್ಲಿ ಅಗ್ನಿಯನ್ನು ಸಾಧನ ಮಾಡಿಕೊಡುವ 'ಶೈತ್ಯ'ವೆಂಬ ಹೇತು ಪ್ರತ್ಯಕ್ಷಬಾಧಿತವೆನಿಸುವದು.

೩೮ ಪ್ರ.—ಅನುಮಾನಬಾಧಿತವೆಂದು ಯಾತಕ್ಕೆ ಅನ್ನುವರು ?

ಉ.—ಸಾಧ್ಯದೊಳಗಿನ ಯಾವ ಹೇತುವಿಗೆ ಅನುಮಾನ ದಿಂದ ಬಾಧೆ ಬರುತ್ತಿರುವದೋ, ಆ ಹೇತುವಿಗೆ ಅನುಮಾನಬಾಧಿತ ಅನ್ನುವರು. ಉದಾ:—“ ಹುಲ್ಲು ಮೊದಲಾದ ಪದಾರ್ಥಗಳಿಗೆ ಯಾರಾದರೂ ಕರ್ತರು ಇದ್ದಾರೆ; ಯಾಕಂದರೆ ಅವು ಕಾರ್ಯಗಳಿರುವವು ” ಆದರೆ ಈ ವಾಕ್ಯದಲ್ಲಿ ಅನುಮಾನದಿಂದ ಬಾಧೆಬರು ವದೇನಂದರೆ:—ಯಾವ ಯಾವ ಪದಾರ್ಥಗಳನ್ನು ಶರೀರಧಾರಣ ಮಾಡಿದವರು ಉಂಟುಮಾಡಿಲ್ಲವೋ, ಆ ಆ ಪದಾರ್ಥಗಳು ಕರ್ತರಿಂದ ಉಂಟುಮಾಡಲ್ಪ ಟ್ಟಂಥವಲ್ಲ. ಉದಾ:—ಆಕಾಶ.

೩೭ ಪ್ರ.—ಆಗಮಬಾಧಿತವೆಂದು ಯಾತಕ್ಕೆ ಅನ್ನುವರು ?

ಉ.—ಶಾಸ್ತ್ರದ ಯೋಗದಿಂದ ಯಾವದರ ಸಾಧ್ಯವು ಬಾಧಿ ತವಾಗುವದೋ, ಆ ಹೇತುವಿಗೆ ಆಗಮಬಾಧಿತ ಅನ್ನುವರು. ಉದಾ:—“ ಪಾಪಗಳು ಸುಖಕೊಡತ ಕ್ಕಂಥವುಗಳಾಗಿರುವವು; ಯಾಕಂದರೆ ಅವು ಕರ್ಮ ಗಳಿರುವವು. ಕರ್ಮಗಳೆಲ್ಲ ಸುಖಕೊಡತಕ್ಕಂಥವೇ. ಉದಾ:—ಪುಣ್ಯಕರ್ಮ ” ಈ ಅನುಮಾನಕ್ಕೆ ಶಾಸ್ತ್ರ ದಿಂದ ಬಾಧೆಬರುವದು. ಯಾಕಂದರೆ ಶಾಸ್ತ್ರದಲ್ಲಿ ಪಾ ಪವು ದು:ಖದಾಯಕವಾದದ್ದೆಂದು ಬರೆದಿರುವದು.

೫೮ ಪ್ರ.—ಸ್ವವಚನಬಾಧಿತ ಅಂದರೇನು ?
ಉ.—ಸಾಧ್ಯದೊಳಗಿನ ಯಾವ ಹೇತುವಿಗೆ ತನ್ನ ಮಾತಿನಿಂದಲೇ ಬಾಧೆ ಬರುತ್ತಿದ್ದರೆ, ಆ ಹೇತುವಿಗೆ ಸ್ವವಚನಬಾಧಿತ ಅನ್ನುವರು. ಉದಾ:—"ನನ್ನ ತಾಯಿಯು ಬಂಜೆ ಇದ್ದಾಳೆ, ಯಾಕಂದರೆ ಪುರುಷಸಂಯೋಗವಾಗಿಯೂ ಕೂಡ ಆಕೆಗೆ ಗರ್ಭನಿಲ್ಲುವದಿಲ್ಲ.

೫೯ ಪ್ರ.—ಅನುಮಾನದ ಅಂಗಗಳು ಎಷ್ಟು ?
ಉ.—ಐದು. ಅವು:—೧ ಪ್ರತಿಜ್ಞಾ, ೨ ಹೇತು, ೩ ಉದಾಹರಣ, ೪ ಉಪನಯ ಮತ್ತು ೫ ನಿಗಮನ.

೬೦ ಪ್ರ.—ಪ್ರತಿಜ್ಞಾ ಅಂದರೇನು ?
ಉ.—ಪಕ್ಷ ಮತ್ತು ಸಾಧ್ಯ ಈ ಎರಡೂ ದ್ವಾರದಿಂದ ಉಚ್ಚಾರಮಾಡುವದಕ್ಕೆ ಪ್ರತಿಜ್ಞಾ ಅನ್ನುವರು. ಉದಾ:—ಈ ಪರ್ವತದ ಮೇಲೆ ಅಗ್ನಿ ಇರುವದು.

೬೧ ಪ್ರ.—ಹೇತು ಅಂದರೇನು ?
ಉ—ಸಾಧನದ ವಚನದ ಉಚ್ಚಾರ ಮಾಡುವದಕ್ಕೆ ಹೇತು ಅನ್ನುವರು. ಉದಾ:-"ಕಾರಣ ಇದು ಧೂಮವಾನ್ ಇರುವದು"

೬೨ ಪ್ರ.--ಉದಾಹರಣೆ ಎಂದು ಯಾತಕ್ಕೆ ಅನ್ನುವರು.

ಉ.—ವ್ಯಾಪ್ತಿಪೂರ್ವಕ ದೃಷ್ಟಾಂತದ ಉಚ್ಚಾರ ಮಾಡುವದೇ ಉದಾಹರಣೆಯು. ಉದಾ:—ಎಲ್ಲೆಲ್ಲಿ ಹೊಗೆ ಇರುವದೋ, ಅಲ್ಲಲ್ಲಿ ಅಗ್ನಿ ಇರುವದು. ಉದಾ:— ಅಡಿಗೆಯ ಮನೆ. ಮತ್ತು ಎಲ್ಲೆಲ್ಲಿ ಅಗ್ನಿ ಇರುವದಿಲ್ಲವೋ, ಅಲ್ಲಲ್ಲಿ ಹೊಗೆಯೂ ಇರುವದಿಲ್ಲ. ಉದಾ:—ಕೆರೆ.

೬೩ ಪ್ರ.—ದೃಷ್ಟಾಂತ ಅಂದರೇನು?

ಉ.—ಯಾವಲ್ಲಿ ಸಾಧ್ಯ ಮತ್ತು ಸಾಧನದ ಅಸ್ತಿತ್ವ ಅಥವಾ ಅಭಾವ ತೋರಿಸಲ್ಪಡುತ್ತದೋ, ಅದಕ್ಕೆ ದೃಷ್ಟಾಂತ ಅನ್ನುವರು. ಉದಾ:–ಅಡಿಗೆಯ ಮನೆ ಅಥವಾ ಕೆರೆ.

೬೪ ಪ್ರ.—ದೃಷ್ಟಾಂತದಲ್ಲಿ ಭೇದಗಳೆಷ್ಟು?

ಪ್ರ.—೧ ಅನ್ವಯ ದೃಷ್ಟಾಂತ ಮತ್ತು ೨ ವ್ಯತಿರೇಕ ದೃಷ್ಟಾಂತಗಳೆಂದು ಎರಡು ಭೇದಗಳುಂಟು.

೬೫ ಪ್ರ.—ಅನ್ವಯದೃಷ್ಟಾಂತವೆಂದು ಯಾತಕ್ಕೆ ಅನ್ನುವರು?

ಉ.—ಯಾವದರಲ್ಲಿ ಸಾಧನದ ಅಸ್ತಿತ್ವದ ಮೇಲಿಂದಲೇ ಸಾಧ್ಯದ ಅಸ್ತಿತ್ವವು ವ್ಯಕ್ತವಾಗುತ್ತಿರುವದೋ, ಅದಕ್ಕೆ ಅನ್ವಯದೃಷ್ಟಾಂತ ಅನ್ನುವರು.. ಉದಾ:— ಅಡಿಗೆಯ ಮನೆಯಲ್ಲಿ ಹೊಗೆಯ ಅಸ್ತಿತ್ವ ಇರುತ್ತಿರಲು ಅಸ್ತಿತ್ವವನ್ನು ತೋರಿಸುವದು.

೧೬ ಪ್ರ.—ವ್ಯತಿರೇಕದೃಷ್ಟಾಂತವೆಂದು ಯಾತಕ್ಕೆ ಅನ್ನುವರು?
ಉ.—ಯಾವಲ್ಲಿ ಸಾಧ್ಯದ ಅಭಾವವಿರುತ್ತಿರಲು, ಸಾಧನದ ಅಭಾವವು ತೋರಿಸಲ್ಪಡುವದೋ, ಆದಕ್ಕೆ ವ್ಯತಿರೇಕ ದೃಷ್ಟಾಂತ ಅನ್ನುವರು. ಉದಾ:—ಕೆರೆ.

೧೭ ಪ್ರ.—ಉಪನಯುವೆಂದರೇನು?
ಉ.—ಪಕ್ಷ ಮತ್ತು ಸಾಧನ ಇವುಗಳಲ್ಲಿ ದೃಷ್ಟಾಂತದ ಸಾದೃಶ್ಯವನ್ನು ತೋರಿಸುವದಕ್ಕೆ ಉಪನಯು ಅನ್ನುವರು. ಉದಾ:— ಈ ಪರ್ವತವಾದರೂ ಹಾಗೆ ಧೂಮವಾನ್ ಇರುವದು.

೧೮ ಪ್ರ.—ನಿಗಮನ ಅಂದರೇನು?
ಉ.—ತಥ್ಯಾಂಶವನ್ನು ತೆಗೆದು ಪ್ರತಿಜ್ಞೆಗೆ ಇಮ್ಮಡಿ ಜೋರು ಕೊಡುವದಕ್ಕೆ ನಿಗಮನ ಅನ್ನುತ್ತಾರೆ. ಉದಾ:— ಇದರಮೇಲಿಂದ ಈ ಪರ್ವತವಾದರೂ ಅಗ್ನಿಮಾನ್ ಇರುವದು.

೧೯ ಪ್ರ.—ಹೇತುವಿನಲ್ಲಿ ಎಷ್ಟು ವಿಧಗಳುಂಟು?
ಉ.—ಮೂರು. ೧ ಕೇವಲಾನ್ವಯಿ, ೨ ಕೇವಲವ್ಯತಿರೇಕಿ, ಮತ್ತು ೩ ಅನ್ವಯವ್ಯತಿರೇಕಿ.

೨೦ ಪ್ರ.—ಕೇವಲಾನ್ವಯಿ ಹೇತುವಿನ ಲಕ್ಷಣ ಏನು?
ಉ.—ಯಾವ ಹೇತುವಿನಲ್ಲಿ ಕೇವಲ ಅನ್ವಯದೃಷ್ಟಾಂತ

ಇರುವದೋ, ಆ ಹೇತುವಿಗೆ ಕೇವಲಾನ್ವಯಿ ಹೇತು ಅನ್ನುವರು. ಉದಾ:—ಜೀವ ಅನೇಕಾಂತರೂಪಿ ಇರುವದು; ಯಾಕಂದರೆ ಅದು ಸತ್‌ಸ್ವರೂಪಿ ಇರುವದು. ಸತ್‌ಸ್ವರೂಪಿ ಇದ್ದದ್ದೆಲ್ಲ ಅನೇಕಾಂತಸ್ವರೂಪಿ ಆಗುವದು. ಉದಾ:—ಪುದ್ಗಲಾದಿಕ.

೭೧ ಪ್ರ.—ಕೇವಲವ್ಯತಿರೇಕಿಹೇತು ಎಂದು ಯಾತಕ್ಕೆ ಅನ್ನುವರು?

ಉ.—ಯಾವದರಲ್ಲಿ ಕೇವಲ ವ್ಯತಿರೇಕದೃಷ್ಟಾಂತ ಇರುವದೋ, ಅದಕ್ಕೆ ಕೇವಲವ್ಯತಿರೇಕಿ ಅನ್ನುವರು. ಉದಾ:—ಜೀವಂತ ಶರೀರದಲ್ಲಿ ಆತ್ಮಾ ಅದೆ, ಯಾಕಂದರೆ ಅದರಲ್ಲಿ ಶ್ವಾಸೋಚ್ಛ್ವಾಸವಿರುವದು. ಯಾವದರಲ್ಲಿ ಆತ್ಮಾ ಇರುವದಿಲ್ಲವೋ, ಅಲ್ಲಿ ಸ್ವಾಸೋಚ್ಛ್ವಾಸವೂ ಇರುವದಿಲ್ಲ. ಉದಾ:—ಗಡಿಗೆ ಮುಂತಾದವು.

೭೨ ಪ್ರ.—ಅನ್ವಯವ್ಯತಿರೇಕಿ ಹೇತು ಎಂದು ಯಾತಕ್ಕೆ ಅನ್ನುವರು?

ಉ.—ಯಾವದರಲ್ಲಿ ಅನ್ವಯೀದೃಷ್ಟಾಂತ ಮತ್ತು ವ್ಯತಿರೇಕಿ ದೃಷ್ಟಾಂತ ಇವೆರಡೂ ಇರುವವೋ, ಅದಕ್ಕೆ ಅನ್ವಯ ವ್ಯತಿರೇಕಿಹೇತು ಅನ್ನುವರು. ಉದಾ:—ಪರ್ವತದಲ್ಲಿ

ಅಗ್ನಿ ಅದೆ, ಯಾಕಂದರೆ ಅಲ್ಲಿ ಹೊಗೆ ಅದೆ. ಎಲ್ಲೆಲ್ಲಿ ಹೊಗೆ ಇರುವದೋ, ಅಲ್ಲಲ್ಲಿ ಅಗ್ನಿಯೂ ಇರುವದು. ಉದಾ:—ಅಡಿಗೆಯ ಮನೆ. ಎಲ್ಲಿ ಅಗ್ನಿ ಇರುವದಿಲ್ಲ, ಅಲ್ಲಿ ಹೊಗೆಯೂ ಇರುವದಿಲ್ಲ. ಉದಾ:—ಕೆರೆ.

೭೩ ಪ್ರ.—ಆಗಮಪ್ರಮಾಣದ ಲಕ್ಷಣ ಯಾವದು?

ಉ.—ಆಪ್ತವಾಕ್ಯಾದಿಗಳಮೇಲಿಂದ ಪ್ರಾಪ್ತವಾದಂಥ ಪದಾರ್ಥಜ್ಞಾನಕ್ಕೆ ಆಗಮಪ್ರಮಾಣ ಅನ್ನುವರು.

೭೪ ಪ್ರ.—ಆಪ್ತರೆಂದು ಯಾರಿಗೆ ಅನ್ನುವರು?

ಉ.—ಪರಮ ಹಿತೋಪದೇಶಕನಾದ ಸರ್ವಜ್ಞ ದೇವನಿಗೆ ಆಪ್ತನೆನ್ನುವರು.

೭೫ ಪ್ರ.—ಪ್ರಮಾಣಕ್ಕೆ ವಿಷಯ ಯಾವದು?

ಉ.—ಸಾಮಾನ್ಯ ಅಥವಾ ಧರ್ಮಿ, ಮತ್ತು ವಿಶೇಷ ಅಥವಾ ಧರ್ಮ, ಇವೆರಡೂ ಅಂಶಗಳ ಸಮೂಹಸ್ವರೂಪದಿಂದ ಇರುವಂಥ ವಸ್ತುಪ್ರಮಾಣವು ವಿಷಯುವಾಗಿರುವದು.

೭೬ ಪ್ರ.—ವಿಶೇಷವೆಂದು ಯಾತಕ್ಕೆ ಅನ್ನುವರು?

ಉ.—ವಸ್ತುವಿನ ಯಾವದೊಂದು ವಿಶಿಷ್ಟ ಅಂಶಕ್ಕೆ ಅಥವಾ ವಿಭಾಗಕ್ಕೆ ವಿಶೇಷ ಅನ್ನುವರು.

೭೭ ಪ್ರ.—ವಿಶೇಷವು ಎಷ್ಟು ಪ್ರಕಾರದ್ದಿರುವದು?

ಉ.—ಎರಡು. ೧ ಸಹಭಾವೀವಿಶೇಷ ಮತ್ತು ೨ ಕ್ರಮಭಾವೀ ವಿಶೇಷ.

೭೮ ಪ್ರ.—ಸಹಭಾವೀವಿಶೇಷ ಅಂದರೇನು?

ಉ.—ವಸ್ತುವಿನ ಪೂರ್ಣ ವಿಭಾಗದಲ್ಲಿ ಮತ್ತು ಅದರ ಸರ್ವ ಅವಸ್ಥೆಯಲ್ಲಿ ಇರತಕ್ಕ ವಿಶೇಷಕ್ಕೆ ಸಹಭಾವೀವಿಶೇಷ ಅಥವಾ ಗುಣ ಅನ್ನುತ್ತಾರೆ.

೭೯ ಪ್ರ.—ಕ್ರಮಭಾವೀವಿಶೇಷವೆಂದು ಯಾತಕ್ಕೆ ಅನ್ನುವರು?

ಉ.—ಕ್ರಮದಿಂದ ಆಗುವ ವಸ್ತುವಿನ ವಿಶೇಷಕ್ಕೆ ಕ್ರಮಭಾವೀ ವಿಶೇಷ ಅಥವಾ ಪರ್ಯಾಯ ಅನ್ನುವರು.

೮೦ ಪ್ರ.—ಪ್ರಮಾಣಾಭಾಸ ಎಂದು ಯಾತಕ್ಕೆ ಅನ್ನುವರು?

ಉ.—ಮಿಥ್ಯಾಜ್ಞಾನಕ್ಕೆ ಪ್ರಮಾಣಾಭಾಸ ಅನ್ನುವರು.

೮೧ ಪ್ರ.—ಪ್ರಮಾಣಾಭಾಸ ಎಷ್ಟು ಇರುವವು?

ಉ.—೧ ಸಂಶಯು, ೨ ವಿಪರ್ಯಯ ಮತ್ತು ೩ ಅನಧ್ಯವಸಾಯ ಹೀಗೆ ಮೂರು ಇರುವವು.

೮೨ ಪ್ರ.—ಸಂಶಯು ಅಂದರೇನು?

ಉ.—ಅನೇಕ ಅನಿಶ್ಚಿತವಾದ ಪದಾರ್ಥಗಳ ಅವಲಂಬನವನ್ನು ಮಾಡಿಸುವಂಥ ಜ್ಞಾನಕ್ಕೆ ಸಂಶಯು ಅನ್ನುವರು. ಉದಾ:—ಇದು ಸಿಂಪೋ ಅಥವಾ ಬೆಳ್ಳಿಯೋ?

ಹೀಗೆ ಪದಾರ್ಥದ ವಿಷಯಕ್ಕೆ ಅರ್ಧಮರ್ಧ ಜ್ಞಾನವಾಗುವದು.

೮೩ ಪ್ರ.—ವಿಪರ್ಯಯವೆಂದು ಯಾತಕ್ಕೆ ಅನ್ನುವರು?

ಉ.—ಒಂದು ಪದಾರ್ಥವು ಅದಕ್ಕೆ ವಿರುದ್ಧವಾದ ಮತ್ತೊಂದು ಪದಾರ್ಥವೆಂದು ನಿಶ್ಚಯವಾದರೆ, ಅದಕ್ಕೆ ವಿಪರ್ಯಯ ಅನ್ನುವರು. ಉದಾ:—ಸಿಂಪುವಿಗೆ ಬೆಳ್ಳಿ ಅನ್ನುವದು.

೮೪ ಪ್ರ.—ಅನಧ್ಯವಸಾಯವೆಂದು ಯಾತಕ್ಕೆ ಅನ್ನುವರು?

ಉ.—'ಇದು ಏನಾದರೂ ಅದೆ' ಹೀಗೆ ಪ್ರತಿಭಾಸ ಆಗುವದಕ್ಕೆ ಅನಧ್ಯವಸಾಯ ಅನ್ನುತ್ತಾರೆ. ಉದಾ:—ಮಾರ್ಗದಿಂದ ಹೋಗುತ್ತಿರುವ ಮನುಷ್ಯನ ಕಾಲಿಗೆ ಹುಲ್ಲು ಮುಂತಾದ್ದು ಸ್ಪರ್ಶವಾದರೆ, ' ತನ್ನ ಕಾಲಕೆಳಗೆ ಏನಾದರೂ ಅದೆ" ಎಂದು ತೋರುವದು.

೮೫ ಪ್ರ.—ನಯವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ವಸ್ತುವಿನ ಒಂದು ಅಂಶವನ್ನು ತಿಳಿಯುವ ಜ್ಞಾನಕ್ಕೆ ನಯ ಅನ್ನುವರು.

೮೬ ಪ್ರ.—ನಯದಲ್ಲಿ ಎಷ್ಟು ಭೇದಗಳು?

ಉ.—೧ ನಿಶ್ಚಯನಯ ಮತ್ತು ೨ ವ್ಯವಹಾರನಯ ಎಂದು ಎರಡು ವಿಧಗಳುಂಟು.

೮೭ ಪ್ರ.—ನಿಶ್ಚಯನಯ ಅಂದರೇನು?

ಉ.—ವಸ್ತುವಿನ ಮೂಲ ಅಂಶವನ್ನು ಗ್ರಹಣ ಮಾಡುವ ಜ್ಞಾನಕ್ಕೆ ನಿಶ್ಚಯನಯ ಅನ್ನುವರು. ಉದಾ:—ಮಣ್ಣಿನಿಂದ ಮಾಡಿದ ಕೊಡಕ್ಕೆ ಮಣ್ಣಿನ ಕೊಡವೇ ಅನ್ನುವದು.

೮೮ ಪ್ರ.—ವ್ಯವಹಾರನಯ ಎಂಬು ಯಾತಕ್ಕೆ ಅನ್ನುವರು?

ಉ.—ಕೆಲನಿಮಿತ್ತದಿಂದ ಒಂದು ಪದಾರ್ಥವನ್ನು ಎರಡನೆಯ ಪದಾರ್ಥದ ಸ್ವರೂಪದ್ದೆಂದು ತಿಳಿಯುವ ಜ್ಞಾನಕ್ಕೆ ವ್ಯವಹಾರನಯ ಅನ್ನುವರು. ಉ:—ಮಣ್ಣಿನ ಕೊಡದಲ್ಲಿ ತುಪ್ಪ ತುಂಬಿದ ಮಾತ್ರದಿಂದ ಅದಕ್ಕೆ ತುಪ್ಪದ ಕೊಡ ಅನ್ನುವದು.

೮೯ ಪ್ರ.—ನಿಶ್ಚಯನಯದಲ್ಲಿ ಎಷ್ಟು ಭೇದಗಳು?

ಉ.—೧ ದ್ರವ್ಯಾರ್ಥಿಕನಯ ಮತ್ತು ೨ ಪರ್ಯಾಯಾರ್ಥಿಕ ನಯಗಳೆಂದು ಎರಡು ವಿಧಗಳು.

೯೦ ಪ್ರ.—ದ್ರವ್ಯಾರ್ಥಿಕನಯದ ಸ್ವರೂಪ ಯಾವದು?

ಉ.—ಯಾವದು ಸಾಮಾನ್ಯವನ್ನು (ದ್ರವ್ಯವನ್ನು) ಗ್ರಹಣ ಮಾಡುವದೋ, ಅದಕ್ಕೆ ದ್ರವ್ಯಾರ್ಥಿಕನಯ ಅನ್ನುವರು.

೯೧ ಪ್ರ.—ಪರ್ಯಾಯಾರ್ಥಿಕನಯದ ಲಕ್ಷಣ ಏನು?

ಉ.—ಯಾವದು ವಿಶೇಷವನ್ನು ಅಂದರೆ ಗುಣ ಅಥವಾ ಪರ್ಯಾಯವನ್ನು ವಿಷಯವನ್ನಾಗಿ ಮಾಡುತ್ತದೋ, ಅದಕ್ಕೆ ಪರ್ಯಾಯಾರ್ಥಿಕನಯ ಅನ್ನುವರು.

೯೨ ಪ್ರ.—ದ್ರವ್ಯಾರ್ಥಿಕನಯದಲ್ಲಿ ಎಷ್ಟು ಭೇದಗಳುಂಟು?

ಉ.—ಮೂರು. ೧ ನೈಗಮ, ೨ ಸಂಗ್ರಹ, ೩ ವ್ಯವಹಾರ.

೯೩ ಪ್ರ.— ನೈಗಮನಯುವೆಂದು ಯಾತಕ್ಕೆ ಅನ್ನುವರು?

ಉ.—ಎರಡು ಪದಾರ್ಥಗಳಲ್ಲಿ ಒಂದನ್ನು ಗೌಣ ಮತ್ತು ಇನ್ನೊಂದನ್ನು ಪ್ರಧಾನ ಮಾಡಿ, ಭೇದ ಅಥವಾ ಅಭೇದವನ್ನು ವಿಷಯಮಾಡುವ ಜ್ಞಾನಕ್ಕೆ ನೈಗಮ ನಯ ಅನ್ನುವರು. ಉದಾ:—ಒಬ್ಬನು ಅಡಿಗೆಯ ಮನೆ ಯಲ್ಲಿ ಅಕ್ಕಿಯನ್ನು ಹಸನಮಾಡುತ್ತ ಕುಳಿತಿರಲು, ಬೇರೊಬ್ಬನು ಅವನಿಗೆ "ನೀನು ಏನು ಮಾಡುತ್ತಿ ರುವಿ?" ಎಂದು ಕೇಳಲು, ಅವನು 'ನಾನು ಅನ್ನಾ ತಯಾರಮಾಡುತ್ತಲಿದ್ದೇನೆ' ಎಂದು ಹೇಳುವನು. ಇಲ್ಲಿ ಅಕ್ಕಿ ಮತ್ತು ಅನ್ನ ಇವುಗಳಲ್ಲಿ ಅಭೇದವಿವಕ್ಷಾ ಅದೆ, ಅಥವಾ ಅಕ್ಕಿಯ ಸ್ಥಳದಲ್ಲಿ ಅನ್ನದ ಸಂಕಲ್ಪ ವಿರುವದು.

೯೪ ಪ್ರ.—ಸಂಗ್ರಹನಯದ ಲಕ್ಷಣ ಯಾವದು?

ಉ.—ಜಾತಿಯ ವಿರೋಧವನ್ನು ವಿಶೇಷವಾಗಿ ತರದೆ, ಅನೇಕ

ವಿಷಯುಗಳನ್ನು ಏಕತ್ರ ಗ್ರಹಣ ಮಾಡುವದಕ್ಕೆ ಸಂಗ್ರಹನಯ ಅನ್ನುವರು. ಉದಾ:—'ಜೀವ' ಎಂದು ಅಂದಕೂಡಲೆ ನಾಲ್ಕೂ ಗತಿಯೊಳಗಿನ ಸರ್ವ ಜೀವಗಳ ಗ್ರಹಣವಾಗುವದು.

೯೫ ಪ್ರ.—ವ್ಯವಹಾರನಯುದ ಸ್ವರೂಪ ಯಾವದು?

ಉ.—ಸಂಗ್ರಹನಯುದಿಂದ ಗ್ರಹಣಮಾಡಿದ ಪದಾರ್ಥಗಳಲ್ಲಿ ವಿಧಿಪೂರ್ವಕವಾಗಿ ಭೇದಮಾಡುವದಕ್ಕೆ ವ್ಯವಹಾರನಯು ಅನ್ನುವರು. ಉದಾ:—ಜೀವಿಗಳಲ್ಲಿ ತ್ರಸ, ಸ್ಥಾವರ ಇತ್ಯಾದಿ ಭೇದಮಾಡುವದು.

೯೬ ಪ್ರ.—ಪರ್ಯಾಯಾರ್ಥಿಕನಯುದಲ್ಲಿ ಎಷ್ಟು ಭೇದಗಳುಂಟು?

ಉ.—ನಾಲ್ಕು. ಅವು:—೧ ಋಜುಸೂತ್ರ, ೨ ಶಬ್ದ, ೩ ಸಮಭಿರೂಢ ಮತ್ತು ೪ ಏವಂಭೂತ.

೯೭ ಪ್ರ.—ಋಜುಸೂತ್ರನಯು ಎಂದು ಯಾತಕ್ಕೆ ಅನ್ನುವರು?

ಉ.—ಭೂತಭವಿಷ್ಯಕಾಲದ ಅಪೇಕ್ಷೆಯನ್ನು ಮಾಡದೆ, ವರ್ತಮಾನಕಾಲದ ಪರ್ಯಾಯುವನ್ನು ಮಾತ್ರ ಯಾವದು ಗ್ರಹಣಮಾಡುವದೋ, ಅದಕ್ಕೆ ಋಜುಸೂತ್ರ ಅನ್ನುವರು.

೯೮ ಪ್ರ.—ಶಬ್ದನಯುವೆಂದು ಯಾತಕ್ಕೆ ಅನ್ನುವರು?

ಉ.—ಲಿಂಗ, ಕಾರಕ, ವಚನ, ಕಾಲ, ಉಪಸರ್ಗಾದಿ ಭೇದಗಳಿಂದ ಯಾವದು ಭೇದರೂಪದಿಂದ ಗ್ರಹಣಮಾಡು

ತ್ರದೋ, ಅದಕ್ಕೆ ಶಬ್ದನಯ ಅನ್ನುವರು. ಉದಾ:— ದಾರ, ಭಾರ್ಯಾ, ಕಲತ್ರ ಇವು ಮೂರು ಭಿನ್ನಲಿಂಗದ ಶಬ್ದಗಳಿದ್ದು, ಒಂದೇ ಸ್ತ್ರೀ ಶಬ್ದವಾಚಕ ಇರುವವು. ಆದ್ದರಿಂದ ಈ ನಯುವು ಸ್ತ್ರೀಪದಾರ್ಥಕ್ಕೆ ಮೂರು ಭೇದರೂಪವನ್ನು ಗ್ರಹಣಮಾಡುವಂಥಾದ್ದದೆ. ಇದರಂತೆಯೇ ಕಾರಕಾದಿಗಳ ದೃಷ್ಟಾಂತವನ್ನು ತಿಳಿಯಬೇಕು.

೯೯ ಪ್ರ.—ಸಮಭಿರೂಢನಯುವೆಂದು ಯಾತಕ್ಕೆ ಅನ್ನುವರು?

ಉ.—ಲಿಂಗಾದಿಗಳ ಭೇದವಿಲ್ಲದಿದ್ದರೂ ಪರ್ಯಾಯ ಶಬ್ದದ ಭೇದದ ಮೇಲಿಂದ ಯಾವದು ಪದಾರ್ಥವನ್ನು ಭೇದಸ್ವರೂಪದಿಂದ ಗ್ರಹಣಮಾಡುವದೋ, ಅದಕ್ಕೆ ಸಮಭಿರೂಢನಯು ಅನ್ನುವರು. ಉದಾ:—ಇಂದ್ರ, ಶುಕ್ರ, ಪುರಂದರ ಇವು ಮೂರೂ ಒಂದೇ ಲಿಂಗದವಿದ್ದು, ಇಂದ್ರವಾಚಕ ಇರುವವು. ಈ ಶಬ್ದಗಳ ಮೇಲಿಂದ ಇಂದ್ರನನ್ನು ಮೂರು ವಿಧದಿಂದ ತಿಳಿಯಲಿಕ್ಕೆ ಬರುತ್ತದೆ.

೧೦೦ ಪ್ರ.—ಏವಂಭೂತನಯುವೆಂದು ಯಾತಕ್ಕೆ ಅನ್ನುವರು?

ಉ.—ಯಾವದೊಂದು ಶಬ್ದದ ಅರ್ಥವು ಯಾವದಿರುವದೋ, ಆ ಪ್ರಕಾರದ ಕ್ರಿಯೆಯನ್ನು ಅದು ಮಾಡುತ್ತಿದ್ದಾಗ್ಗೆ

ಅದಕ್ಕೆ ಹಾಗೆ ಅನ್ನುವದು ಏವಂಭೂತನಯವೆನಿಸು ವದು. ಉದಾ:—ಪೂಜಾ ಮಾಡುವವನು ಯಾವಾಗ್ಗೆ ಪೂಜೆಯನ್ನು ಮಾಡುತ್ತಿರುವನೋ, ಅದೇ ವೇಳೆಯಲ್ಲಿ ಯೇ ಅವನಿಗೆ ಪೂಜಾರಿ ಅನ್ನುವದು.

೧೦೧ಪ್ರ.—ವ್ಯವಹಾರನಯ ಅಥವಾ ಉಪನಯ ಎಷ್ಟು ವಿಧವಾ ಗಿರುವದು?

ಉ.—ಮೂರು. ಅವು:—೧ ಸದ್ಭೂತ ವ್ಯವಹಾರನಯ, ೨ ಅಸದ್ಭೂತ ವ್ಯವಹಾರನಯ, ಮತ್ತು ೩ ಉಪಚರಿತ ವ್ಯವಹಾರನಯ.

೧೦೨ಪ್ರ.—ಸದ್ಭೂತ ವ್ಯವಹಾರನಯ ಅಂದರೇನು?

ಉ.—ಒಂದೇ ಅಖಂಡ ದ್ರವ್ಯವನ್ನು ಭೇದಸ್ವರೂಪದಿಂದ ವಿ ಷಯವನ್ನಾಗಿ ಮಾಡುವ ಜ್ಞಾನಕ್ಕೆ ಸದ್ಭೂತ ವ್ಯವ ಹಾರನಯ ಅನ್ನುವರು. ಉದಾ:—ಜೀವದಲ್ಲಿ ಕೇವಲ ಜ್ಞಾನಾದಿ ಅಥವಾ ಮತಿಜ್ಞಾನಾದಿ ಅನೇಕ ಗುಣಗಳಿ ರುವವೆಂದು ತಿಳಿಯುವದು.

೧೦೩ಪ್ರ.—ಅಸದ್ಭೂತ ವ್ಯವಹಾರನಯವೆಂದು ಯಾತಕ್ಕೆ ಅನ್ನು ವರು?

ಉ.—ಒಟ್ಟಾಗಿ ಕೂಡಿದ ಪದಾರ್ಥವನ್ನು ಅಭೇದ ಸ್ವರೂಪ ದಿಂದ ಗ್ರಹಣ ಮಾಡುವದು. ಉದಾ:—ಈ ಶರೀ

ರವು ನನ್ನದದೆಯೆಂದು ಅನ್ನುವದು, ಅಥವಾ ಮಣ್ಣಿನ ಪಾತ್ರೆಗೆ ತುಪ್ಪದ ಪಾತ್ರೆ ಅನ್ನುವದು ಅಸದ್ಭೂತವ್ಯವಹಾರನಯುವೆನಿಸುವದು.

೧೦೪ ಪ್ರ.—ಉಪಚರಿತ ವ್ಯವಹಾರ ಅಥವಾ ಉಪಚರಿತ ಅಸದ್ಭೂತವ್ಯವಹಾರನಯುವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಅತ್ಯಂತ ಭಿನ್ನ ಪದಾರ್ಥಗಳನ್ನು ಯಾವದು ಅಭೇದಸ್ವರೂಪದಿಂದ ಗ್ರಹಣ ಮಾಡುತ್ತದೋ, ಅದಕ್ಕೆ ಉಪಚರಿತ ವ್ಯವಹಾರನಯು ಅನ್ನುವರು. ಉದಾ:— ಆನೆ, ಕುದುರೆ ಮುಂತಾದವುಗಳು ನನ್ನವೆಂದು ಅನ್ನುವದು.

೧೦೫ ಪ್ರ.—ನಿಕ್ಷೇಪ ಅಂದರೇನು?

ಉ.—ಯುಕ್ತಿಯನ್ನು ಹಿಡಿದು ಇರುವ ಮಾರ್ಗದಲ್ಲಿ ಕೆಲವು ಪ್ರಯೋಜನ ವಿಶೇಷಣದ ಮೂಲಕ, ನಾಮ, ಸ್ಥಾಪನಾ, ದ್ರವ್ಯ ಮತ್ತು ಭಾವಗಳೆಂಬ ಸ್ಥಾನಗಳಲ್ಲಿ ಪದಾರ್ಥವನ್ನು ಸ್ಥಾಪಿಸುವದಕ್ಕೆ ನಿಕ್ಷೇಪ ಅನ್ನುವರು.

೧೦೬ ಪ್ರ.—ನಿಕ್ಷೇಪದಲ್ಲಿ ಎಷ್ಟು ಭೇದಗಳುಂಟು?

ಉ.—೧ ನಾಮನಿಕ್ಷೇಪ, ೨ ಸ್ಥಾಪನಾನಿಕ್ಷೇಪ, ೩ ದ್ರವ್ಯನಿಕ್ಷೇಪ, ೪ ಭಾವನಿಕ್ಷೇಪಗಳೆಂದು ನಾಲ್ಕು ಭೇದಗಳುಂಟು.

೧೦೭ ಪ್ರ.—ನಾಮನಿಕ್ಷೇಪವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಪದಾರ್ಥದಲ್ಲಿ ಯಾವ ಗುಣ ಇರುವದಿಲ್ಲವೋ, ಆ ಪದಾರ್ಥವನ್ನು ಆ ಗುಣದಿಂದ ಕರೆಯುವದು ನಾಮನಿಕ್ಷೇಪವೆನಿಸುವದು. ಉದಾ:--ಯಾವನಾದರೂ ತನ್ನ ಮಗನಿಗೆ ಆನೆ, ಸಿಂಹ ಎಂದು ಹೆಸರು ಇಡುತ್ತಾನೆ. ಆದರೆ ಆ ಹುಡುಗನಲ್ಲಿ ಆನೆಯ ಅಥವಾ ಸಿಂಹದ ಗುಣವೇನೂ ಇರುವದಿಲ್ಲ.

೧೦೮ ಪ್ರ.—ಸ್ಥಾಪನಾನಿಕ್ಷೇಪವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಸಾಕಾರ ಅಥವಾ ನಿರಾಕಾರ ಪದಾರ್ಥವನ್ನು 'ಅದು ಇದು ಅದೆ, ಎಂದು ತಿಳಿದು ಅದನ್ನು ಆ ಪದಾರ್ಥದ ಸ್ಥಳದಲ್ಲಿ ಪ್ರವೇಶ ಮಾಡಿಸುವದು ಸ್ಥಾಪನಾನಿಕ್ಷೇಪವೆನಿಸುವದು. ಉದಾ:--ಪಾರ್ಶ್ವನಾಥನ ಪ್ರತಿಬಿಂಬಕ್ಕೆ ಪಾರ್ಶ್ವನಾಥನೆಂದು ಅನ್ನುವದು, ಅಥವಾ ಚದುರಂಗದ ಆಟಿಕೆಗಳಿಗೆ ಆನೆ, ಕುದುರೆ ಎಂದು ಅನ್ನುವದು.

೧೦೯ ಪ್ರ.—ನಾಮನಿಕ್ಷೇಪ ಮತ್ತು ಸ್ಥಾಪನಾನಿಕ್ಷೇಪ ಇವುಗಳಲ್ಲಿ ಭೇದವೇನು?

ಉ.—ನಾಮನಿಕ್ಷೇಪದಲ್ಲಿ ಮೂಲ ಪದಾರ್ಥದಂತೆ ಸತ್ಕಾರಾದಿ ಕ್ರಿಯೆಯ ಪ್ರವೃತ್ತಿಯಾಗುವದಿಲ್ಲ, ಅದು

ಸ್ಥಾಪನಾನಿಕ್ಷೇಪದಲ್ಲಿ ಆಗುತ್ತದೆ. ಇದೇ ಇವುಗಳಲ್ಲಿ ಭೇದವು. ಉದಾ:—ಯಾವನಾದರೂ ತನ್ನ ಮಗನಿಗೆ ಪಾರ್ಶ್ವನಾಥನೆಂದು ಹೆಸರು ಇಟ್ಟರೂ, ಪಾರ್ಶ್ವನಾಥನಂತೆ ಆದರಸತ್ಕಾರವಾಗುವದಿಲ್ಲ, ಆದರೆ ಅದೇ ಪಾರ್ಶ್ವನಾಥ ಪ್ರತಿಮೆಯಲ್ಲಿ ಆಗುತ್ತದೆ.

೧೦ ಪ್ರ.—ದ್ರವ್ಯನಿಕ್ಷೇಪವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಪದಾರ್ಥದಲ್ಲಿ ಮುಂದೆ ಪ್ರಾಪ್ತವಾಗುವ ಪರಿಣಾಮದ ಯೋಗ್ಯತೆ ಇರುವದೋ, ಅದಕ್ಕೆ ದ್ರವ್ಯನಿಕ್ಷೇಪ ಅನ್ನುವರು. ಉದಾ:—ಅರಸನ ಮಗನಿಗೆ ಅರಸು ಅನ್ನುವದು.

೧೧ ಪ್ರ.—ಭಾವನಿಕ್ಷೇಪವೆಂದು ಯಾತಕ್ಕೆ ಅನ್ನುವರು?

ಉ.—ವರ್ತಮಾನಕಾಲದಲ್ಲಿ ಅಂದರೆ ಸದ್ಯಕ್ಕೆ ಯಾವ ಪರ್ಯಾಯ ಇರುವದೋ, ಅದೇ ಪರ್ಯಾಯವನ್ನೇ ಧಾರಣಮಾಡುವ ಪದಾರ್ಥಕ್ಕೆ ಭಾವನಿಕ್ಷೇಪ ಅನ್ನುವರು. ಉದಾ:—ರಾಜ್ಯಭಾರವನ್ನು ಮಾಡುತ್ತಿರುವ ಪುರುಷನಿಗೆ ರಾಜನೆಂದು ಅನ್ನುವದು.



# ೨ನೇ ಅಧ್ಯಾಯು.



೧೧೨ ಪ್ರ.—ದ್ರವ್ಯ ಎಂದು ಯಾತಕ್ಕೆ ಅನ್ನುತ್ತಾರೆ?
ಉ.—ಗುಣಗಳ ಸಮೂಹಕ್ಕೆ ದ್ರವ್ಯವೆನ್ನುವರು.

೧೧೩ ಪ್ರ.—ಗುಣ ಎಂದು ಯಾತಕ್ಕೆ ಅನ್ನುವರು?
ಉ.—ದ್ರವ್ಯಗಳ ಸರ್ವಭಾಗಗಳೊಳಗೆ ಹಾಗು ಸರ್ವ ಅವಸ್ಥೆಗಳೊಳಗೆ ಯಾವದು ಇರುವದೋ, ಅದಕ್ಕೆ ಗುಣ ಅನ್ನುವರು.

೧೧೪ ಪ್ರ.—ಗುಣಗಳಲ್ಲಿ ಎಷ್ಟು ಭೇದಗಳು?
ಉ.—(೧) ಸಾಮಾನ್ಯ ಹಾಗು (೨) ವಿಶೇಷಗಳೆಂಬ ಎರಡು ಭೇದಗಳು.

೧೧೫ ಪ್ರ.—ಸಾಮಾನ್ಯಗುಣವೆಂದು ಯಾತಕ್ಕೆ ಅನ್ನುವರು?
ಉ.—ಯಾವು ಸರ್ವದ್ರವ್ಯಗಳಲ್ಲಿಯೂ ವ್ಯಾಪಿಸಿಕೊಂಡಿರುವವೋ, ಅವಕ್ಕೆ ಸಾಮಾನ್ಯಗುಣ ಅನ್ನುತ್ತಾರೆ.

೧೧೬ ಪ್ರ.—ವಿಶೇಷಗುಣ ಎಂದು ಯಾತಕ್ಕೆ ಅನ್ನುವರು?
ಉ.—ಯಾವದು ಸರ್ವ ದ್ರವ್ಯಗಳಲ್ಲಿ ವ್ಯಾಪಿಸಿಕೊಂಡಿರುವದಿಲ್ಲವೋ, ಅದಕ್ಕೆ ವಿಶೇಷಗುಣ ಅನ್ನುವರು.

೧೧೭ ಪ್ರ.—ಸಾಮಾನ್ಯ ಗುಣಗಳು ಎಷ್ಟಿರುವವು?

ಉ.—ಅನೇಕ ಇರುವವು. ಆದರೆ ಅವುಗಳಲ್ಲಿ ಮುಖ್ಯ ಆರು ಇರುವವು. ಅವು:—೧ ಅಸ್ತಿತ್ವ, ೨ ವಸ್ತುತ್ವ, ೩ ದ್ರವ್ಯತ್ವ, ೪ ಪ್ರಮೇಯತ್ವ, ೫ ಅಗುರುಲಘುತ್ವ ಮತ್ತು ೬ ಪ್ರದೇಶವತ್ವ.

೧೧೮ ಪ್ರ.—ಅಸ್ತಿತ್ವ ಗುಣದ ಲಕ್ಷಣವೇನು?

ಉ.—ಯಾವ ಶಕ್ತಿಯ ನಿಮಿತ್ತದಿಂದ ದ್ರವ್ಯಕ್ಕೆ ಎಂದೂ ನಾಶ ಇರುವದಿಲ್ಲ, ಅದಕ್ಕೆ ಅಸ್ತಿತ್ವಗುಣ ಅನ್ನುವರು.

೧೧೯ ಪ್ರ.—ವಸ್ತುತ್ವಗುಣದ ಲಕ್ಷಣವೇನು?

ಉ.—ಯಾವ ಶಕ್ತಿಯ ನಿಮಿತ್ತದಿಂದ ದ್ರವ್ಯದಲ್ಲಿ ಅರ್ಥ ಕ್ರಿಯಾಕಾರಿತ್ವವು ಬರುವದೋ, ಅದಕ್ಕೆ ವಸ್ತುತ್ವ ಗುಣ ಅನ್ನುವರು. ಉದಾ:—ಕೊಡದ ಅರ್ಥಕ್ರಿಯೆಯು ಜಲಧಾರಣವಾಗುವದು ಇರುವದು. ಈ ಜಲಧಾರಣಕ್ರಿಯೆಗೆ ವಸ್ತುತ್ವ ಅನ್ನುವರು.

೧೨೦ ಪ್ರ.—ದ್ರವ್ಯತ್ವಗುಣವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಶಕ್ತಿಯ ನಿಮಿತ್ತದಿಂದ ದ್ರವ್ಯವು ಯಾವಾಗಲೂ ಒಂದೇಸವನೇ ಉಳಿಯುವದಿಲ್ಲ, ಮತ್ತು ಯಾವದರ ಪರ್ಯಾಯವು (ಅವಸ್ಥೆ) ಯಾವಾ

ಗಲೂ ಬದಲಾಗುತ್ತಿರುತ್ತದೆ, ಆ ಶಕ್ತಿಗೆ ದ್ರವ್ಯತ್ವ ಗುಣ ಅನ್ನುವರು.

೧೨೧ ಪ್ರ.—ಪ್ರಮೇಯತ್ವಗುಣ ಅಂದರೇನು?

ಉ.—ಯಾವ ಶಕ್ತಿಯ ನಿಮಿತ್ತದಿಂದ ದ್ರವ್ಯವು ಯಾವದಾದರೊಂದು ಜ್ಞಾನದ ವಿಷಯವಾಗುತ್ತದೆ, ಆ ಶಕ್ತಿಗೆ ಪ್ರಮೇಯತ್ವಗುಣ ಅನ್ನುವರು.

೧೨೨ ಪ್ರ.—ಅಗುರುಲಘುತ್ವಗುಣವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಶಕ್ತಿಯ ನಿಮಿತ್ತದಿಂದ ದ್ರವ್ಯದೊಳಗಿನ ದ್ರವ್ಯತ್ವವು ಸ್ಥಿರವಾಗಿ ಉಳಿಯುತ್ತದೋ, ಅಂದರೆ ಒಂದು ದ್ರವ್ಯವು ಎರಡನೆಯ ದ್ರವ್ಯಸ್ವರೂಪದಿಂದ ಪರಿಣಮಿಸುವದಿಲ್ಲವೋ, ಮತ್ತು ಒಂದು ದ್ರವ್ಯದೊಳಗಿನ ಅನಂತ ಗುಣಗಳನ್ನು ಮರೆತು ಬೇರೆ ಆಗುವದಿಲ್ಲವೋ, ಆ ಶಕ್ತಿಗೆ ಅಗುರುಲಘುತ್ವ ಅನ್ನುವರು.

೧೨೩ ಪ್ರ.—ಪ್ರದೇಶವತ್ವಗುಣವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಶಕ್ತಿಯ ನಿಮಿತ್ತದಿಂದ ದ್ರವ್ಯಕ್ಕೆ ಯಾವದಾದರೊಂದು ಆಕಾರವು ಅವಶ್ಯವಾಗಿ ಉಳಿಯುತ್ತದೋ, ಆ ಶಕ್ತಿಗೆ ಪ್ರದೇಶವತ್ವಗುಣ ಅನ್ನುವರು.

೧೨೪ ಪ್ರ.—ದ್ರವ್ಯದಲ್ಲಿ ಭೇದಗಳೆಷ್ಟು ?

ಉ.—೧ ಜೀವ, ೨ ಪುದ್ಗಲ, ೩ ಧರ್ಮ, ೪ ಅಧರ್ಮ, ೫ ಆಕಾಶ ಮತ್ತು ೬ ಕಾಲ ಹೀಗೆ ಆರು ಭೇದಗಳಿರುವವು.

೧೨೫ ಪ್ರ.—ಜೀವದ್ರವ್ಯದ ಲಕ್ಷಣವೇನು?

ಉ.—ಯಾವ ದ್ರವ್ಯದಲ್ಲಿ ಚೇತನಾಗುಣ (ಚೈತನ್ಯ) ವಿರುವದೋ, ಅದಕ್ಕೆ ಜೀವದ್ರವ್ಯ ಅನ್ನುವರು.

೧೨೬ ಪ್ರ.—ಪುದ್ಗಲದ್ರವ್ಯ ಅಂದರೇನು?

ಉ.—ಯಾವದರಲ್ಲಿ ಸ್ಪರ್ಶ, ರಸ, ಗಂಧ, ವರ್ಣಗಳಿರುವವೋ, ಆ ದ್ರವ್ಯಕ್ಕೆ ಪುದ್ಗಲದ್ರವ್ಯ ಅನ್ನುವರು.

೧೨೭ ಪ್ರ.—ಪುದ್ಗಲದ್ರವ್ಯದಲ್ಲಿ ಎಷ್ಟು ಭೇದಗಳುಂಟು?

ಉ.—೧ ಪರಮಾಣು ಮತ್ತು ೨ ಸ್ಕಂಧಗಳೆಂದು ಎರಡು ಭೇದಗಳು.

೧೨೮ ಪ್ರ.—ಪರಮಾಣು ಅಂದರೇನು?

ಉ.—ಸರ್ವಕ್ಕೂ ಸಣ್ಣದಾದ ಪುದ್ಗಲಕ್ಕೆ ಪರಮಾಣು ಅನ್ನುವರು.

೧೨೯ ಪ್ರ.—ಸ್ಕಂಧ ಅಂದರೇನು?

ಉ.—ಅನೇಕ ಪರಮಾಣುಗಳ ಬಂಧಕ್ಕೆ ಸ್ಕಂಧ ಅನ್ನುವರು.

೧೩೦ ಪ್ರ.—ಬಂಧ ಅಂದರೇನು?

ಉ.—ಅನೇಕ ವಸ್ತುಗಳಲ್ಲಿ ಏಕತ್ವವುಂಟೆಂಬ ಜ್ಞಾನವು

ಯಾತರಿಂದ ಆಗುವದೋ, ಆ ಸಂಬಂಧವಿಶೇಷಕ್ಕೆ ಬಂಧ ಅನ್ನುವರು.

೧೨೧ ಪ್ರ.—ಸ್ಕಂಧದಲ್ಲಿ ಭೇದಗಳೆಷ್ಟು?

ಉ.—ಆಹಾರವರ್ಗಣಾ, ತೈಜಸವರ್ಗಣಾ, ಭಾಷಾವರ್ಗಣಾ, ಮನೋವರ್ಗಣಾ, ಕಾರ್ಮಾಣವರ್ಗಣಾ, ಇತ್ಯಾದಿ ೨೨ ಭೇದಗಳಿರುವವು.

೧೨೨ ಪ್ರ—ಆಹಾರವರ್ಗಣಾ ಅಂದರೇನು?

ಉ.—ಔದಾರಿಕ, ವೈಕ್ರಯಿಕ, ಆಹಾರಕ ಈ ಮೂರು ಶರೀರಸ್ವರೂಪಗಳಿಂದ ಯಾವದು ಪರಿಣಮಿಸುವದೋ ಅದಕ್ಕೆ ಆಹಾರವರ್ಗಣಾ ಅನ್ನುವರು.

೧೨೩ ಪ್ರ.—ಔದಾರಿಕಶರೀರ ಅಂದರೇನು?

ಉ.—ಮನುಷ್ಯ ಮತ್ತು ಪಶುಗಳ ಸ್ಥೂಲ ಶರೀರಕ್ಕೆ ಔದಾರಿಕ ಶರೀರ ಅನ್ನುವರು.

೧೨೪ ಪ್ರ.—ವೈಕ್ರಯಿಕ ಶರೀರ ಅಂದರೇನು?

ಉ.—ಯಾವ ಶರೀರವು ಸಣ್ಣ ದೊಡ್ಡ, ಏಕ ಅನೇಕ, ಇತ್ಯಾದಿ ನಾನಾ ಪ್ರಕಾರದ ಕ್ರಿಯೆಗಳನ್ನು ಮಾಡುತ್ತದೋ, ಅಂಥ ದೇವ ಮತ್ತು ನಾರಕೀ ಜೀವಿಗಳ ಶರೀರಕ್ಕೆ ವೈಕ್ರಯಿಕ ಶರೀರ ಅನ್ನುವರು.

೧೨೫ ಪ್ರ.—ಆಹಾರಕಶರೀರ ಅಂದರೇನು?

ಉ.—ಆರನೇ ಗುಣಸ್ಥಾನವರ್ತಿ ಮುನಿಗಳಿಗೆ ತತ್ವದಲ್ಲಿ ಏನಾದರೂ ಸಂಶಯ ಉತ್ಪನ್ನವಾದರೆ, ಕೇವಲಿ ಅಥವಾ ಶ್ರುತಕೇವಲಿಗಳ ಬಳಿಗೆ ಹೋಗುವದಕ್ಕಾಗಿ, ಅವರ ಮಸ್ತಕದೊಳಗಿಂದ ಒಂದು ಮೊಳ ಪ್ರಮಾಣದ ಮೂರ್ತಿಯು ಹೊರಡುತ್ತದೆ, ಆ ಮೂರ್ತಿಯ ಶರೀರಕ್ಕೆ ಆಹಾರಕಶರೀರ ಅನ್ನುತ್ತಾರೆ.

೧೩೬ ಪ್ರ.—ತೈಜಸವರ್ಗಣಾ ಅಂದರೇನು?

ಉ.—ಔದಾರಿಕ, ವೈಕ್ರಿಯಿಕ, ಶರೀರಗಳನ್ನು ಪ್ರಕಾಶಿಸುವ ತೈಜಸ ಶರೀರವು ಯಾವ ವರ್ಗಣದಿಂದುಂಟಾಗುವದೋ, ಅದಕ್ಕೆ ತೈಜಸವರ್ಗಣಾ ಅನ್ನುವರು.

೧೩೭ ಪ್ರ.—ಭಾಷಾವರ್ಗಣಾ ಅಂದರೇನು?

ಉ.— ಯಾವ ಪುದ್ಗಲಸ್ಕಂಧವು ಶಬ್ದರೂಪದಿಂದ ಪರಿಣಮಿಸುತ್ತದೋ, ಅದಕ್ಕೆ ಭಾಷಾವರ್ಗಣಾ ಅನ್ನುವರು.

೧೩೮ ಪ್ರ.—ಕಾರ್ಮಾಣವರ್ಗಣಾ ಅಂದರೇನು?

ಉ.—ಯಾವ ಪುದ್ಗಲಸ್ಕಂಧವು ಕಾರ್ಮಾಣಶರೀರರೂಪದಿಂದ ಪರಿಣಮಿಸುವದೋ, ಅದಕ್ಕೆ ಕಾರ್ಮಾಣವರ್ಗಣಾ ಅನ್ನುವರು.

೧೩೯ ಪ್ರ.—ಕಾರ್ಮಾಣಶರೀರ ಅಂದರೇನು?

ಉ.—ಜ್ಞಾನಾವರ್ಣಾದಿ ಅಷ್ಟಕರ್ಮಗಳ ಸಮೂಹಕ್ಕೆ

ಕಾರ್ಮಾಣಶರೀರ ಅನ್ನುವರು.

೧೪೦ ಪ್ರ.—ತೈಜಸ ಮತ್ತು ಕಾರ್ಮಾಣಶರೀರಗಳು ಯಾರಿಗೆ ಆಗುತ್ತವೆ?

ಉ.—ಸರ್ವ ಸಂಸಾರಿ ಜೀವಿಗಳಿಗೆ ತೈಜಸ ಮತ್ತು ಕಾರ್ಮಾಣ ಶರೀರಗಳು ಇರುತ್ತವೆ.

೧೪೧ ಪ್ರ.—ಧರ್ಮದ್ರವ್ಯ ಅಂದರೇನು?

ಉ.—ಗಮನ ಮಾಡಲಿಕ್ಕೆ ಉದ್ಯುಕ್ತವಾದ ಜೀವ ಮತ್ತು ಪುದ್ಗಲಗಳಿಗೆ ಗಮನ ಮಾಡಲಿಕ್ಕೆ ಯಾವದು ಸಹಾಯ ಮಾಡುತ್ತದೋ, ಅದಕ್ಕೆ ಧರ್ಮದ್ರವ್ಯ ಅನ್ನುವರು. ಉದಾ:—ಮೀನುಗಳಿಗೆ ನೀರು. ನೀರು ಇದ್ದರೆ, ಮೀನುಗಳಿಗೆ ಗಮನ ಮಾಡಲಿಕ್ಕೆ ಬರುತ್ತದೆ. ಅದರಂತೆ ಧರ್ಮದ್ರವ್ಯ ಇದ್ದರೆ, ಜೀವ ಪುದ್ಗಲಗಳಿಗೆ ಗಮನ ಮಾಡಲಿಕ್ಕೆ ಬರುತ್ತದೆ.

೧೪೨ ಪ್ರ.—ಅಧರ್ಮದ್ರವ್ಯ ಅಂದರೇನು?

ಉ.—ಗತಿಯುಳ್ಳ ಜೀವಪುದ್ಗಲಗಳಿಗೆ ಸ್ಥಿರವಾಗಲಿಕ್ಕೆ ಯಾವದು ಸಹಾಯ ಮಾಡುತ್ತದೋ, ಅದು ಅಧರ್ಮದ್ರವ್ಯವು.

೧೪೩ ಪ್ರ.—ಆಕಾಶದ್ರವ್ಯ ಅಂದರೇನು?

ಉ.—ಯಾವದು ಜೀವಾದಿ ಪಂಚದ್ರವ್ಯಗಳಿಗೆ ಇರಲಿಕ್ಕೆ

ಸ್ಥಳವನ್ನು ಕೊಡುವದೋ, ಅದಕ್ಕೆ ಆಕಾಶದ್ರವ್ಯ ಅನ್ನುವರು.

೧೪೪ ಪ್ರ.—ಕಾಲದ್ರವ್ಯ ಅಂದರೇನು?

ಉ.—ಕುಂಬಾರನ ತಿಗರಿಯು ತಿರುಗಲಿಕ್ಕೆ ಅದರ ಕೆಳಗಿನ ಕಬ್ಬಿಣದ 'ಅಣಿ'ಯು ಕಾರಣವಾಗುತ್ತದೆ. ಅದರಂತೆ ಯಾವದು ಜೀವಾದಿ ದ್ರವ್ಯಗಳು ಪರಿಣಮಿಸುವದಕ್ಕೆ ಸಹಾಯಭೂತವಾಗುವದೋ ಅದಕ್ಕೆ ಕಾಲದ್ರವ್ಯ ಅನ್ನುವರು.

೧೪೫ ಪ್ರ.—ಕಾಲದ್ರವ್ಯದಲ್ಲಿ ಭೇದಗಳೆಷ್ಟು?

ಉ.—೧ ನಿಶ್ಚಯಕಾಲ ಮತ್ತು ೨ ವ್ಯವಹಾರಕಾಲಗಳೆಂದು ಎರಡು.

೧೪೬ ಪ್ರ.—ನಿಶ್ಚಯಕಾಲ ಅಂದರೇನು?

ಉ.—ಕಾಲದ್ರವ್ಯಕ್ಕೆ ನಿಶ್ಚಯಕಾಲವೆನ್ನುವರು.

೧೪೭ ಪ್ರ.—ವ್ಯವಹಾರಕಾಲ ಅಂದರೇನು?

ಉ.—ಕಾಲದ್ರವ್ಯದ ಗಳಿಗೆ, ದಿನ, ಮಾಸ, ವರ್ಷ ಮೊದಲಾದ ಪರ್ಯಾಯಗಳಿಗೆ ವ್ಯವಹಾರಕಾಲ ಅನ್ನುವರು.

೧೪೮ ಪ್ರ.—ಪರ್ಯಾಯ ಅಂದರೇನು?

ಉ.—ಗುಣಾನ ವಿಕಾರಕ್ಕೆ ಪರ್ಯಾಯ ಅನ್ನುವರು.

೧೪೯ ಪ್ರ.—ಪರ್ಯಾಯದಲ್ಲಿ ಭೇದಗಳೆಷ್ಟು?

ಉ.—೧ ವ್ಯಂಜನಪರ್ಯಾಯ ಮತ್ತು ೨ ಅರ್ಥಪರ್ಯಾಯ ಗಳೆಂದು ಎರಡು ವಿಧಗಳುಂಟು.

೧೫೦ ಪ್ರ.—ವ್ಯಂಜನಪರ್ಯಾಯ ಅಂದರೇನು?

ಉ.—ಪ್ರದೇಶವತ್ವಗುಣದ ವಿಕಾರಕ್ಕೆ ವ್ಯಂಜನಪರ್ಯಾಯ ಅನ್ನುವರು.

೧೫೧ ಪ್ರ.—ವ್ಯಂಜನಪರ್ಯಾಯದಲ್ಲಿ ಭೇದಗಳೆಷ್ಟು?

ಉ.—೧ ಸ್ವಭಾವವ್ಯಂಜನಪರ್ಯಾಯ ಮತ್ತು ೨ ವಿಭಾವ ವ್ಯಂಜನಪರ್ಯಾಯಗಳೆಂದು ಎರಡು ವಿಧಗಳುಂಟು.

೧೫೨ ಪ್ರ.—ಸ್ವಭಾವವ್ಯಂಜನಪರ್ಯಾಯ ಅಂದರೇನು?

ಉ.—ಇತರ ಪದಾರ್ಥಗಳ ನಿಮಿತ್ತವಿಲ್ಲದೆ, ಯಾವ ವ್ಯಂಜನ ಪರ್ಯಾಯವಾಗುತ್ತದೋ ಅದಕ್ಕೆ ಸ್ವಭಾವವ್ಯಂಜನಪರ್ಯಾಯವೆನ್ನುವರು. ಉದಾ:— ಜೀವದ ಶುದ್ಧ ಪರ್ಯಾಯವು.

೧೫೩ ಪ್ರ.—ವಿಭಾವವ್ಯಂಜನಪರ್ಯಾಯ ಅಂದರೇನು?

ಉ.—ಇತರ ಪದಾರ್ಥಗಳ ನಿಮಿತ್ತದಿಂದ ಯಾವ ವ್ಯಂಜನ ಪರ್ಯಾಯವಾಗುವದೋ, ಅದಕ್ಕೆ ವಿಭಾವವ್ಯಂಜನಪರ್ಯಾಯವೆನ್ನುವರು. ಉದಾ:— ಜೀವದ

ನರನಾರಕಾದಿ ಪರ್ಯಾಯಗಳು.

೧೫೪ ಪ್ರ.—ಅರ್ಥಪರ್ಯಾಯ ಅಂದರೇನು?

ಉ.—ಪ್ರದೇಶತ್ವಗುಣದ ಹೊರ್ತು ಉಳಿದ ಸರ್ವ ಗುಣಗಳ ವಿಕಾರಕ್ಕೆ ಅರ್ಥಪರ್ಯಾಯವೆನ್ನುವರು.

೧೫೫ ಪ್ರ.—ಅರ್ಥಪರ್ಯಾಯದಲ್ಲಿ ಭೇದಗಳೆಷ್ಟು?

ಉ.—ಎರಡು. ೧ ಸ್ವಭಾವ ಅರ್ಥಪರ್ಯಾಯ ಮತ್ತು ೨ ವಿಭಾವ ಅರ್ಥಪರ್ಯಾಯ.

೧೫೬ ಪ್ರ—ಸ್ವಭಾವ-ಅರ್ಥ-ಪರ್ಯಾಯ ಅಂದರೇನು?

ಉ.—ಇತರ ಯಾವ ಪದಾರ್ಥದ ನಿಮಿತ್ತವಿಲ್ಲದೆ, ಯಾವ ಅರ್ಥಪರ್ಯಾಯವಾಗುತ್ತದೋ, ಅದಕ್ಕೆ ಸ್ವಭಾವ ಅರ್ಥಪರ್ಯಾಯ ಅನ್ನುವರು. ಉದಾ:–ಜೀವಕ್ಕೆ ಕೇವಲಜ್ಞಾನವು.

೧೫೭ ಪ್ರ.--ವಿಭಾವ-ಅರ್ಥಪರ್ಯಾಯ ಅಂದರೇನು?

ಉ.—ಪರನಿಮಿತ್ತದಿಂದಾಗುವ ಅರ್ಥಪರ್ಯಾಯಕ್ಕೆ ವಿಭಾವ ಅರ್ಥಪರ್ಯಾಯ ಅನ್ನುವರು. ಉದಾ:–ಜೀವದ ರಾಗದ್ವೇಷ ಮೊದಲಾದವು.

೧೫೮ ಪ್ರ—ಉತ್ಪಾದ ಅಂದರೇನು?

ಉ.—ದ್ರವ್ಯದಲ್ಲಿ ಹೊಸ ಪರ್ಯಾಯ ಉತ್ಪನ್ನವಾಗುವದಕ್ಕೆ ಉತ್ಪಾದ ಅನ್ನುತ್ತಾರೆ.

೧೪೯ ಪ್ರ.—ವ್ಯಯ ಅಂದರೇನು?

ಉ.—ದ್ರವ್ಯದ ಪೂರ್ವಪರ್ಯಾಯದ ನಾಶವಾಗೋಣವೇ ವ್ಯಯವೆನಿಸುವದು.

೧೫೦ ಪ್ರ.—ಧ್ರೌವ್ಯ ಅಂದರೇನು?

ಉ.—ಪ್ರತ್ಯಭಿಜ್ಞಾನಕ್ಕೆ ಕಾರಣೀಭೂತವಾದ ದ್ರವ್ಯದ ಯಾವದಾದರೂ ಅವಸ್ಥೆಯು ನಿತ್ಯವಾಗಿ ಉಳಿಯುವದೇ ಧ್ರೌವ್ಯವೆನಿಸುವದು.

೧೫೧ ಪ್ರ.—ದ್ರವ್ಯದಲ್ಲಿರುವ ವಿಶೇಷ ಗುಣಗಳು ಯಾವವು?

ಉ.—ಜೀವದ್ರವ್ಯದಲ್ಲಿ–ಚೈತನ್ಯ, ಸಮ್ಯಕ್ತ್ವಚಾರಿತ್ರ ಮೊದಲಾದವು.

ಪುದ್ಗಲದ್ರವ್ಯದಲ್ಲಿ–ಸ್ಪರ್ಶ,ರಸ,ಗಂಧ,ವರ್ಣ ಎಂಬವು.
ಧರ್ಮದ್ರವ್ಯದಲ್ಲಿ–ಗತಿಹೇತುತ್ವ ಮುಂತಾದವು.
ಅಧರ್ಮದ್ರವ್ಯದಲ್ಲಿ–ಸ್ಥಿತಿಹೇತುತ್ವ ಮುಂತಾದವು.
ಆಕಾಕಾಶದ್ರವ್ಯದಲ್ಲಿ–ಅವಗಾಹನಹೇತುತ್ವ ಹಾಗು
ಕಾಲದ್ರವ್ಯದಲ್ಲಿ–ಪರಿಣಮನಹೇತುತ್ವ ಮೊದಲಾದ ವಿಶೇಷ ಗುಣಗಳಿರುವವು.

೧೫೨ ಪ್ರ.—ಆಕಾಶದಲ್ಲಿ ಭೇದಗಳೆಷ್ಟು?

ಉ.—ಆಕಾಶವು ಅಖಂಡವಾದ ಒಂದೇ ದ್ರವ್ಯವಿರುವದು.

೧೫೩ ಪ್ರ.—ಆಕಾಶವು ಎಲ್ಲಿರುವದು?

ಉ.—ಆಕಾಶವು ಸರ್ವ ಸ್ಥಳದಲ್ಲಿಯೂ ವ್ಯಾಪಿಸಿರುವದು.

೧೬೪ ಪ್ರ.—ಲೋಕಾಕಾಶವೆಂದು ಯಾತಕ್ಕೆ ಅನ್ನುವರು ?

ಉ.—ಎಲ್ಲಿ ಜೀವ, ಅಜೀವ, ಧರ್ಮ, ಅಧರ್ಮ ಹಾಗು ಕಾಲಗಳೆಂಬ ಪಂಚದ್ರವ್ಯಗಳು ಇರುವವೋ, ಆ ಪ್ರದೇಶಕ್ಕೆ ಲೋಕಾಕಾಶವೆನ್ನುವರು.

೧೬೫ ಪ್ರ.—ಅಲೋಕಾಕಾಶವೆಂದು ಯಾತಕ್ಕೆ ಅನ್ನುವರು?

ಉ.—ಲೋಕದ ಹೊರಗಿನ ಆಕಾಶಕ್ಕೆ ಅಲೋಕಾಕಾಶ ವೆನ್ನುವರು.

೧೬೬ ಪ್ರ.—ಲೋಕದ ಅಗಲು, ಉದ್ದ, ಪಿಂಡ ಮುಂತಾದವು ಎಷ್ಟಿರುವವು ?

ಉ.—ಲೋಕದ ಉತ್ತರದಕ್ಷಿಣ ಸರ್ವ ಸ್ಥಳಗಳಲ್ಲಿ ದಪ್ಪ ಏಳು ರಜ್ಜು ಅದೆ. ಅಗಲು ಪೂರ್ವಪಶ್ಚಿಮ ಮೂಲ ದಲ್ಲಿ ಏಳು ರಜ್ಜು ಇದ್ದು, ಮೇಲೆ ಕ್ರಮವಾಗಿ ಕಡಿಮೆ ಆಗುತ್ತ ಆಗುತ್ತ ಏಳು ರಜ್ಜುವಿನ ಎತ್ತರದ ಮೇಲೆ ಒಂದು ರಜ್ಜು ಅದೆ. ಪುನಃ ಅಲ್ಲಿಂದ ಹೆಚ್ಚಾಗುತ್ತ ಆಗುತ್ತ ಹತ್ತುವರಿ ರಜ್ಜುವಿನ ಎತ್ತರದಮೇಲೆ ಐದು ರಜ್ಜು ಇದ್ದು, ಪುನಃ ಅಲ್ಲಿಂದ ಕ್ರಮವಾಗಿ ಕಡಿಮೆಯಾಗಹತ್ತಿ, ಹದಿನಾಲ್ಕನೆಯ ರಜ್ಜುವಿನ ಎತ್ತರದಮೇಲೆ ಒಂದು ರಜ್ಜು ಅದೆ. ಕೆಳಗಿಂದ

ಮೇಲಿನವರೆಗೆ ಒಟ್ಟಿಗೆ ಎತ್ತರ ಹದಿನಾಲ್ಕು ರಜ್ಜು ಅದೆ.

೧೬೭ ಪ್ರ.—ಧರ್ಮ ಮತ್ತು ಅಧರ್ಮದ್ರವ್ಯಗಳು ವಿಭಾಗಸ್ವರೂಪಾತಕವಾಗಿರುವವೋ? ಅಥವಾ ಅಖಂಡಸ್ವರೂಪಿಗಳಿರುವವೋ? ಮತ್ತು ಇವು ಎಲ್ಲಿರುವವು?

ಉ.—ಧರ್ಮ ಮತ್ತು ಅಧರ್ಮ ದ್ರವ್ಯಗಳು ಅಖಂಡಸ್ವರೂಪಿಗಳಿದ್ದು, ಸರ್ವಲೋಕಾಕಾಶದಲ್ಲಿ ವ್ಯಾಪಿಸಿಕೊಂಡಿರುವವು.

೧೬೮ ಪ್ರ.—ಪ್ರದೇಶ ಯಾತಕ್ಕೆ ಅನ್ನುವರು?

ಉ.—ಆಕಾಶದ ಎಷ್ಟು ಭಾಗ ಪುದ್ಗಲದ ಒಂದು ಪರಮಾಣು ಹಿಡಿಸುತ್ತದೋ, ಅಷ್ಟು ಭಾಗಕ್ಕೆ ಪ್ರದೇಶ ಅನ್ನುವರು.

೧೬೯ ಪ್ರ.—ಕಾಲದ್ರವ್ಯದಲ್ಲಿ ಎಷ್ಟು ಭೇದ ಅವೆ ಮತ್ತು ಅವು ಎಲ್ಲಿರುತ್ತವೆ?

ಉ.—ಎಷ್ಟು ಲೋಕಾಕಾಶದ ಪ್ರದೇಶಗಳಿರುವವೋ, ಅಷ್ಟೇ ಕಾಲದ್ರವ್ಯದ ಪ್ರದೇಶಗಳಿರುವವು. ಮತ್ತು ಲೋಕಾಕಾಶದ ಒಂದೊಂದು ಪ್ರದೇಶದ ಮೇಲೆ ಒಂದೊಂದು ಕಾಲದ್ರವ್ಯ (ಕಾಲಾಣು) ಇರುವದು.

೧೭೦ ಪ್ರ.—ಪುದ್ಗಲದ್ರವ್ಯಗಳು ಎಷ್ಟು ಪ್ರಕಾರದವಿರುವವು,

ಮತ್ತು ಅವು ಎಲ್ಲಿರುತ್ತವೆ?

ಉ.—ಪುದ್ಗಲದ್ರವ್ಯಗಳು ಅನಂತಾನಂತ ಇದ್ದು, ಅವು ಸಂಪೂರ್ಣ ಲೋಕಾಕಾಶದಲ್ಲಿಯೇ ತುಂಬಿರುವವು.

೧೭೧ ಪ್ರ.—ಜೀವದ್ರವ್ಯಗಳು ಎಷ್ಟಿರುವವು ಮತ್ತು ಅವು ಎಲ್ಲಿರುವವು?

ಉ.—ಜೀವದ್ರವ್ಯಗಳು ಅನಂತಾನಂತ ಇದ್ದು, ಅವೆಲ್ಲ ಲೋಕಾಕಾಶದಲ್ಲಿಯೇ ತುಂಬಿರುವವು.

೧೭೨ ಪ್ರ.—ಒಂದು ಜೀವವು ಎಷ್ಟು ದೊಡ್ಡದಿರುವದು?

ಉ.—ಪ್ರದೇಶದ ಸಂಬಂಧದಿಂದ ನೋಡಿದರೆ, ಒಂದು ಜೀವವು ಲೋಕಾಕಾಶಕ್ಕೆ ಸರಿ ಇರುವದು. ಆದರೆ ಸಂಕೋಚವಿಸ್ತಾರಗಳಮೂಲಕ ಅದು ತನ್ನ ಶರೀರ ಪ್ರಮಾಣ ಇರುವದು. ಮುಕ್ತಜೀವಗಳು ತಮ್ಮ ಕಟ್ಟಕಡೆಯ ಶರೀರಪ್ರಮಾಣಗಳಿಂದಿರುವವು.

೧೭೩ ಪ್ರ.—ಲೋಕಾಕಾಶದಷ್ಟು ಯಾವ ಜೀವ ಇರುವದು?

ಉ.—ಮೋಕ್ಷಕ್ಕೆ ಹೋಗುವದಕ್ಕಿಂತ ಮೊದಲು ಸಮುದ್ಘಾತವನ್ನು ಮಾಡುವ ಜೀವವು ಲೋಕಾಕಾಶದಷ್ಟಿರುವದು.

೧೭೪ ಪ್ರ.—ಸಮುದ್ಘಾತವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಮೂಲ ಶರೀರವನ್ನು ಬಿಡದೆ, ಜೀವದ ಪ್ರದೇಶವು ಹೊರಹೊರಡುವದಕ್ಕೆ ಸಮುದ್ಘಾತ ಅನ್ನುವರು.

೧೭೫ ಪ್ರ.—ಅಸ್ತಿಕಾಯ ಅಂದರೇನು?

ಉ.—ಬಹುಪ್ರದೇಶೀ ದ್ರವ್ಯಕ್ಕೆ ಅಸ್ತಿಕಾಯ ಅನ್ನುವರು.

೧೭೬ ಪ್ರ.—ಅಸ್ತಿಕಾಯುಗಳೆಷ್ಟಿರುವವು?

ಉ.—ಜೀವ, ಪುದ್ಗಲ, ಧರ್ಮ, ಅಧರ್ಮ, ಮತ್ತು ಆಕಾಶ ಗಳೆಂದು ಐದು ಇರುವವು. ಈ ಐದು ದ್ರವ್ಯಗಳಿಗೆ ಪಂಚಾಸ್ತಿಕಾಯುಗಳೆನ್ನುವರು. ಕಾಲವು ಬಹುಪ್ರ ದೇಶೀ ಅಲ್ಲ, ಆದ್ದರಿಂದ ಅದು ಅಸ್ತಿಕಾಯವು ಅಲ್ಲೇ ಅಲ್ಲ.

೧೭೭ ಪ್ರ.—ಪುದ್ಗಲಪರಮಾಣು ಏಕಪ್ರದೇಶೀ ಇದ್ದ ಮೇಲೆ ಅದಕ್ಕೆ ಅಸ್ತಿಕಾಯುವೆಂದು ಹ್ಯಾಗೆ ಅನ್ನಬೇಕು?

ಉ.—ಪುದ್ಗಲಪರಮಾಣುಶಕ್ತಿಯು ಸಂಬಂಧದಿಂದ ಅಸ್ತಿ ಕಾಯುವೇ ಆಗಿರುವದು. ಪರಮಾಣು ಸ್ಕಂಧಸ್ವರೂ ಪಿಯಾಗಿ ಬಹುಪ್ರದೇಶೀ ಆಗುವದು. ಇದರಿಂದ ಅದಕ್ಕೆ ಉಪಚಾರನಯುದಿಂದ ಅಸ್ತಿಕಾಯುವೆಂಬ ಸಂಜ್ಞೆ ಇರುವದು.

೧೭೮ ಪ್ರ.—ಅನುಜೀವೀಗುಣ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಭಾವಸ್ವರೂಪೀ ಗುಣಕ್ಕೆ ಅನುಜೀವೀಗುಣ ಅನ್ನ

ತ್ತಾರೆ. ಉದಾ:—ಸಮ್ಯಕ್ತ್ವ, ಚಾರಿತ್ರ, ಸುಖ, ಚೈತನ್ಯ, ಸ್ಪರ್ಶ, ರಸ, ಗಂಧ, ವರ್ಣಾದಿಗಳು.

೧೭೯ ಪ್ರ.—ಪ್ರತಿಜೀವೀಗುಣ ಯಾತಕ್ಕೆ ಅನ್ನುತ್ತಾರೆ?

ಉ.—ವಸ್ತುವಿನ ಅಭಾವಸ್ವರೂಪೀ ಧರ್ಮಕ್ಕೆ ಪ್ರತಿಜೀವೀ ಗುಣ ಅನ್ನುತ್ತಾರೆ. ಉದಾ:—ನಾಸ್ತಿತ್ವ, ಅಮೂರ್ತತ್ವ, ಅಚೇತನತ್ವ ಮುಂತಾದವು.

೧೮೦ ಪ್ರ.—ಅಭಾವ ಎಂದು ಯಾತಕ್ಕೆ ಅನ್ನುವರು?

ಉ.—ಒಂದು ಪದಾರ್ಥದ್ದು ಮತ್ತೊಂದು ಪದಾರ್ಥದ ಸ್ಥಳದಲ್ಲಿ ನಾಸ್ತಿತ್ವ ಇರುವದು. ಇದಕ್ಕೆ ಅಭಾವ ಅನ್ನುತ್ತಾರೆ.

೧೮೧ ಪ್ರ.—ಅಭಾವದಲ್ಲಿ ಭೇದಗಳೆಷ್ಟು?

ಉ.—೧ ಪ್ರಾಗಭಾವ, ೨ ಪ್ರಧ್ವಂಸಾಭಾವ, ೩ ಅನ್ಯೋನ್ಯಾಭಾವ, ಮತ್ತು ೪ ಅತ್ಯಂತಾಭಾವಗಳೆಂದು ನಾಲ್ಕು ಭೇದಗಳುಂಟು.

೧೮೨ ಪ್ರ.—ಪ್ರಾಗಭಾವ ಅಂದರೇನು?

ಉ.— ವರ್ತಮಾನಪರ್ಯಾಯದ ಪೂರ್ವಪರ್ಯಾಯದಲ್ಲಿ ಇರುವ ಅಭಾವಕ್ಕೆ ಪ್ರಾಗಭಾವ ಅನ್ನುತ್ತಾರೆ.

೧೮೩ ಪ್ರ.—ಪ್ರಧ್ವಂಸಾಭಾವ ಅಂದರೇನು?

ಉ.—ಮುಂದೆ ಆಗುವ ಪರ್ಯಾಯದಲ್ಲಿ ವರ್ತಮಾನ

ಪರ್ಯಾಯದ ಅಭಾವ ಇರೋಣವೇ ಪ್ರಧ್ವಂಸಾ
ಭಾವವೆನಿಸುವದು.

೧೮೪ ಪ್ರ.—ಅನ್ಯೋನ್ಯಾಭಾವ ಅಂದರೇನು?
ಉ.—ಪುದ್ಗಲದ್ರವ್ಯದ ವರ್ತಮಾನಕಾಲದೊಳಗಿನ ಒಂದು ಪರ್ಯಾಯದೊಳಗೆ, ಎರಡನೆಯ ಪುದ್ಗಲದ ವರ್ತಮಾನಕಾಲದೊಳಗಿನ ಪರ್ಯಾಯದ ಅಭಾವ ಇರುವದೇ ಅನ್ಯೋನ್ಯಾಭಾವವೆನಿಸುವದು.

೧೮೫ ಪ್ರ.—ಅತ್ಯಂತಾಭಾವ ಅಂದರೇನು?
ಉ.—ಒಂದು ದ್ರವ್ಯದೊಳಗೆ ಬೇರೆ ದ್ರವ್ಯದ ಅಭಾವ ಇರೋಣವೇ ಅತ್ಯಂತಾಭಾವವೆನಿಸುವದು.

## ಅನುಜೀವೀಗುಣ.

೧೮೬ ಪ್ರ.—ಜೀವದ ಅನುಜೀವೀಗುಣ ಯಾವದು?
ಉ.—ಚೇತನಾ, ಸಮ್ಯಕ್ತ್ವ, ಚಾರಿತ್ರ, ಸುಖ, ವೀರ್ಯ, ಭವ್ಯತ್ವ, ಅಭವ್ಯತ್ವ, ಜೀವಿತ್ವ, ವೈಭಾವಿಕ, ಕರ್ತೃತ್ವ, ಭೋಕ್ತೃತ್ವ, ಮೊದಲಾದ ಅನಂತ ಗುಣಗಳಿರುವವು.

೧೮೭ ಪ್ರ.—ಜೀವದ ಪ್ರತಿಜೀವೀಗುಣ ಯಾವದು?
ಉ.—ಅವ್ಯಾಬಾಧ, ಅವಗಾಹ, ಅಗುರುಲಘು, ಸೂಕ್ಷ್ಮತ್ವ, ನಾಸ್ತಿತ್ವ ಇತ್ಯಾದಿ.

೧೪೮ ಪ್ರ.—ಚೇತನಾ ಅಂದರೇನು?

ಉ.—ಯಾತರಲ್ಲಿ ಪದಾರ್ಥದ ಪ್ರತಿಭಾಸ ( ತಿಳುವಳಿಕೆ ) ವಾಗುತ್ತದೋ, ಅದಕ್ಕೆ ಚೇತನಾ ಅನ್ನುವರು.

೧೪೯ ಪ್ರ.—ಚೇತನಗಳಲ್ಲಿ ಭೇದಗಳೆಷ್ಟು?

ಉ.—ದರ್ಶನಚೇತನಾ ಮತ್ತು ಜ್ಞಾನಚೇತನಗಳೆಂದು ಎರಡು ವಿಧಗಳಿರುವವು.

೧೫೦ ಪ್ರ.—ದರ್ಶನಚೇತನಾ ಅಂದರೇನು?

ಉ.—ಯಾತರಲ್ಲಿ ಮಹಾಸತ್ತೆಯ ( ಸಾಮಾನ್ಯದ ) ಪ್ರತಿಭಾಸ ( ಜ್ಞಾನ ) ವಾಗುತ್ತದೋ, ಅದಕ್ಕೆ ದರ್ಶನಚೇತನಾ ಅನ್ನುವರು. ಉದಾ:—ಏನಾದರೂ ಅದೆ ಎಂಬ ಜ್ಞಾನವಾಗುವದು.

೧೫೧ ಪ್ರ.—ಮಹಾಸತ್ತಾ ಅಂದರೇನು?

ಉ.—ಸರ್ವ ಪದಾರ್ಥಗಳ ಅಸ್ತಿತ್ವಗುಣವನ್ನು ಗ್ರಹಣ ಮಾಡುವ ಸತ್ತೆಗೆ ಮಹಾಸತ್ತಾ ಅನ್ನುವರು.

೧೫೨ ಪ್ರ.—ಜ್ಞಾನಚೇತನಾ ಅಂದರೇನು?

ಉ.—ಅವಾಂತರಸತ್ತೆಯಿಂದ ಯುಕ್ತವಾದಂಥ ವಿಶೇಷ ಪದಾರ್ಥವನ್ನು ವಿಷಯಮಾಡುವ ಚೇತನಕ್ಕೆ ಜ್ಞಾನಚೇತನಾ ಅನ್ನುವರು.

೧೫೩ ಪ್ರ.—ಅವಾಂತರಸತ್ತಾ ಅಂದರೇನು?

ಉ.—ಒಂದಾನೊಂದು ವಿವಿಕ್ಷಿತ ಪದಾರ್ಥದ ಸತ್ತೆಗೆ ಅವಾಂತರಸತ್ತಾ ಅನ್ನುವರು.

೧೯೪ ಪ್ರ.—ದರ್ಶನಚೇತನದಲ್ಲಿ ಭೇದಗಳೆಷ್ಟು?

ಉ.—೧ ಚಕ್ಷುರ್ದರ್ಶನ, ೨ ಅಚಕ್ಷುರ್ದರ್ಶನ, ೩ ಅವಧಿ ದರ್ಶನ ಮತ್ತು ೪ ಕೇವಲದರ್ಶನಗಳೆಂದು ನಾಲ್ಕು ಭೇದಗಳಿರುವವು.

೧೯೫ ಪ್ರ.—ಜ್ಞಾನಚೇತನದಲ್ಲಿ ಭೇದಗಳೆಷ್ಟು?

ಉ.—೧ ಮತಿಜ್ಞಾನ, ೨ ಶ್ರುತಜ್ಞಾನ, ೩ ಅವಧಿಜ್ಞಾನ, ೪ ಮನಃಪರ್ಯಯಜ್ಞಾನ, ಮತ್ತು ಕೇವಲಜ್ಞಾನ ಗಳೆಂದು ಐದು ಭೇದಗಳುಂಟು.

೧೯೬ ಪ್ರ.—ಮತಿಜ್ಞಾನ ಅಂದರೇನು?

ಉ.—ಇಂದ್ರಿಯ ಹಾಗು ಮನಸ್ಸುಗಳ ಸಹಾಯದಿಂದ ಆಗುವ ಪದಾರ್ಥಗಳ ಜ್ಞಾನಕ್ಕೆ ಮತಿಜ್ಞಾನ ವೆನ್ನುವರು.

೧೯೭ ಪ್ರ.—ಮತಿಜ್ಞಾನದಲ್ಲಿ ಭೇದಗಳೆಷ್ಟು?

ಉ.—ಎರಡು. (೧) ಸಾಂವ್ಯಾವಹಾರಿಕಪ್ರತ್ಯಕ್ಷಮತಿ ಜ್ಞಾನ ಮತ್ತು (೨) ಸಾಂವ್ಯಾವಹಾರಿಕಪರೋಕ್ಷ ಮತಿಜ್ಞಾನ.

೧೯೮ ಪ್ರ.—ಪರೋಕ್ಷಮತಿಜ್ಞಾನದಲ್ಲಿ ಭೇದಗಳೆಷ್ಟು?

ಉ.—೧ ಸ್ಮೃತಿ, ೨ ಪ್ರತ್ಯಭಿಜ್ಞಾನ, ೩ ತರ್ಕ, ಮತ್ತು ೪ ಅನುಮಾನಗಳೆಂದು ನಾಲ್ಕು ಭೇದಗಳುಂಟು.

೧೯೯ ಪ್ರ.—ಮತಿಜ್ಞಾನದಲ್ಲಿ ಬೇರೆ ತರದಿಂದ ಭೇದಗಳೆಷ್ಟು?

ಉ.—೧ ಅವಗ್ರಹ, ೨ ಈಹಾ, ೩ ಅವಾಯ, ಮತ್ತು ೪ ಧಾರಣಾ ಹೀಗೆ ನಾಲ್ಕು ಭೇದಗಳು.

೨೦೦ ಪ್ರ.—ಅವಗ್ರಹ ಅಂದರೇನು?

ಉ.—ಇಂದ್ರಿಯ ಮತ್ತು ಪದಾರ್ಥ ಇವೆರಡೂ ತಮ್ಮ ತಮ್ಮ ಯೋಗ್ಯಸ್ಥಳದಲ್ಲಿರುವಾಗ, ಸಾಮಾನ್ಯ ಪ್ರತಿಭಾಸಸ್ವರೂಪಿ ದರ್ಶನ ಆದಮೇಲೆ, ಅವಾಂತರಸತ್ತೆಯಿಂದ ಯುಕ್ತವಾದಂಥ ವಿಶೇಷಪದಾರ್ಥದ ಜ್ಞಾನವಾಗುವದೇ ಅವಗ್ರಹವೆನಿಸುವದು. ಉದಾ-ಇವನು ಮನುಷ್ಯನಿದ್ದಾನೆ.

೨೦೧ ಪ್ರ.—ಈಹಾ ಅಂದರೇನು?

ಉ.—ಅವಗ್ರಹದಿಂದ ತಿಳಿದ ಪದಾರ್ಥಗಳಲ್ಲಿ ಉಂಟಾದ ಸಂಶಯವನ್ನು ದೂರಮಾಡುವಂಥ ಅಭಿಲಾಷಿಸ್ವರೂಪಿ ಜ್ಞಾನಕ್ಕೆ ಈಹಾ ಅನ್ನುವರು. ಈ ಜ್ಞಾನವು ಇಷ್ಟು ಅಬಲವಾಗಿರುತ್ತದಲ್ಲ, ಒಂದು ಪದಾರ್ಥದ ಈಹಾಜ್ಞಾನವಾಗಿ, ಅದು ಇಲ್ಲದಾಯಿತೆಂದರೆ, ಅದೇ ವಿಷಯದ ಸಂಬಂಧ ಕಾಲಾಂತರದಿಂದ ಸಂಶ

ಯ ಮತ್ತು ವರವು ಆಗುತ್ತದೆ. ಉದಾ:— ಇವರು ಠಾಕುರದಾಸಜಿಯುವರೇನು?

೨೦೨ ಪ್ರ.—ಅವಾಯ ಅಂದರೇನು?

ಉ.—ಈಹಾಜ್ಞಾನದಿಂದ ತಿಳಿದಂಥ ಪದಾರ್ಥದಲ್ಲಿ, ಆ ಪದಾರ್ಥವು ಇದೇ ಅದೆ, ಎರಡನೆಯ ಸ್ವರೂಪ ದ್ದಲ್ಲ, ಎಂಬ ನಿಶ್ಚಲವಾದ ಜ್ಞಾನವಾಗುವದಕ್ಕೆ ಅವಾಯ ಅನ್ನುವರು. ಅವಾಯದಿಂದ ತಿಳಿದಂಥ ಪದಾರ್ಥಗಳಲ್ಲಿ ಸಂಶಯು ಉಂಟಾಗುವದಿಲ್ಲ; ಆದರೆ ಒಮ್ಮೊಮ್ಮೆ ವಿಸ್ಮರಣ ಮಾತ್ರ ಆಗುತ್ತದೆ. ಉದಾ:— ಇವರು ಠಾಕುರದಾಸಜಿಯುವರೇ ಇದ್ದಾರೆ, ಬೇರೆ ಯಾರೂ ಅಲ್ಲ.

೨೦೩ ಪ್ರ.—ಧಾರಣಾ ಅಂದರೇನು?

ಉ.—ಯಾವ ಜ್ಞಾನದಿಂದ ತಿಳಿದಂಥ ಪದಾರ್ಥದ ವಿಷ ಯಕ್ಕೆ ಕಾಲಾಂತರದಿಂದ ಸಹ ವಿಸ್ಮರಣವಾಗುವ ದಿಲ್ಲವೋ, ಆ ಜ್ಞಾನಕ್ಕೆ ಧಾರಣಾ ಅನ್ನುವರು.

೨೦೪ ಪ್ರ.—ಮತಿಜ್ಞಾನಕ್ಕೆ ವಿಷಯವಾಗಿರುವ ಪದಾರ್ಥಗಳಲ್ಲಿ ಭೇದಗಳೆಷ್ಟು?

ಉ.—೧ ವ್ಯಕ್ತ ಮತ್ತು ೨ ಅವ್ಯಕ್ತಗಳೆಂದು ಎರಡು ವಿಧ ಗಳು.

೨೦೫ ಪ್ರ.—ಅವಗ್ರಹಾದಿ ಜ್ಞಾನಗಳು ಎರಡೂ ಪದಾರ್ಥಗಳಲ್ಲಿ ಆಗುತ್ತವೋ ಇಲ್ಲೋ?

ಉ.—ವ್ಯಕ್ತಪದಾರ್ಥಗಳಲ್ಲಿ ಅವಗ್ರಹಾದಿ ನಾಲ್ಕೂ ಜ್ಞಾನಗಳು ಆಗುತ್ತವೆ; ಆದರೆ ಅವ್ಯಕ್ತ ಪದಾರ್ಥಗಳಲ್ಲಿ ಬರೇ ಅವಗ್ರಹವೇ ಆಗುತ್ತದೆ.

೨೦೬ ಪ್ರ.—ಅರ್ಥಾವಗ್ರಹ ಅಂದರೇನು?

ಉ.—ವ್ಯಕ್ತ ಪದಾರ್ಥಗಳ ಅವಗ್ರಹಕ್ಕೆ (ಜ್ಞಾನಕ್ಕೆ) ಅರ್ಥಾವಗ್ರಹ ಅನ್ನುತ್ತಾರೆ.

೨೦೭ ಪ್ರ.—ವ್ಯಂಜನಾವಗ್ರಹ ಅಂದರೇನು?

ಉ.—ಅವ್ಯಕ್ತಪದಾರ್ಥದ ಅವಗ್ರಹಕ್ಕೆ (ಜ್ಞಾನಕ್ಕೆ) ವ್ಯಂಜನಾವಗ್ರಹವೆನ್ನುತ್ತಾರೆ.



೨೦೮ ಪ್ರ.—ವ್ಯಂಜನಾವಗ್ರಹವು ಅರ್ಥಾವಗ್ರಹದಂತೆ ಸರ್ವ ಇಂದ್ರಿಯ ಹಾಗು ಮನಸ್ಸುಗಳ ದ್ವಾರದಿಂದ ಆಗುತ್ತದೋ ಇಲ್ಲೋ?

ಉ.—ವ್ಯಂಜನಾವಗ್ರಹವು ಚಕ್ಷು ಮತ್ತು ಮನಸ್ಸುಗಳ ಹೊರತು ಉಳಿದ ಸರ್ವ ಇಂದ್ರಿಯಗಳಿಂದ ಆಗುತ್ತದೆ.

೨೦೯ ಪ್ರ.—ವ್ಯಕ್ತ ಮತ್ತು ಅವ್ಯಕ್ತ ಪದಾರ್ಥಗಳಲ್ಲಿ ಎಷ್ಟು ಭೇದಗಳವೆ?

ಉ.—ಪ್ರತಿಯೊಂದರಲ್ಲಿ ಹನ್ನೆರಡು ಭೇದಗಳಿರುವವು. ಅವು:—ಬಹು, ಏಕ, ಬಹುವಿಧ, ಏಕವಿಧ, ಕ್ಷಿಪ್ರ, ಅಕ್ಷಿಪ್ರ, ನಿಃಸೃತ, ಅನಿಃಸೃತ, ಉಕ್ತ, ಅನುಕ್ತ, ಧ್ರುವ ಮತ್ತು ಅಧ್ರುವ.

೨೧೦ ಪ್ರ.—ಶ್ರುತಜ್ಞಾನವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಮತಿಜ್ಞಾನದಿಂದ ತಿಳಿದಂಥ ಪದಾರ್ಥಗಳ ಸಂಬಂಧ ದಿಂದ (ನಿಮಿತ್ತದಿಂದ) ಎರಡನೆಯದೊಂದು ಪದಾರ್ಥವನ್ನು ತಿಳಿಯುವದು ಶ್ರುತಜ್ಞಾನವೆನಿಸುವದು. ಉದಾ:—'ಘಟ' ಎಂಬ ಶಬ್ದವನ್ನು ಕೇಳಿದ ಮಾತ್ರದಿಂದಲೇ ಅದು ಗೋಲಾಕಾರದ್ದು ಇದ್ದು, ಅದಕ್ಕೆ ಕಂಟ ಮುಂತಾದ್ದು ಇರುತ್ತದೆಂಬ ಘಟದ ವಿಶೇಷ ಸ್ವರೂಪಜ್ಞಾನವು ಯಾತರ ಯೋಗದಿಂದ ಪ್ರಾಪ್ತವಾಗುವದೋ ಅದಕ್ಕೆ ಶ್ರುತಜ್ಞಾನವೆನ್ನುವರು.

೨೧೧ ಪ್ರ.—ದರ್ಶನ ಯಾವಾಗ ಆಗುತ್ತದೆ?

ಉ.—ಜ್ಞಾನಕ್ಕಿಂತ ಮೊದಲು ದರ್ಶನವಾಗುತ್ತದೆ. ದರ್ಶನವಿಲ್ಲದೆ, ಸ್ವಲ್ಪ ಜ್ಞಾನವಿರುವ ಜೀವಿಗಳಿಗೆ ಜ್ಞಾನವಾಗುವದಿಲ್ಲ. ಆದರೆ ಸರ್ವಜ್ಞನಿಗೆ ಜ್ಞಾನ ಮತ್ತು ದರ್ಶನಗಳೆರಡೂ ಏಕಕಾಲಕ್ಕೆ ಆಗುತ್ತವೆ.

೨೧೨ ಪ್ರ.—ಚಕ್ಷುದರ್ಶನವೆಂದರೇನು?

ಉ.—ಮತಿಜ್ಞಾನದ ಪೂರ್ವದಲ್ಲಿ ಪ್ರಾಪ್ತವಾಗುವ ನೇತ್ರ ಜನ್ಯ ಸಾಮಾನ್ಯಪ್ರತಿಭಾಸಕ್ಕೆ ಅಥವಾ ಅವಲೋಕನಕ್ಕೆ ಚಕ್ಷುದರ್ಶನವೆನ್ನುತ್ತಾರೆ.

೨೧೩ ಪ್ರ.—ಅಚಕ್ಷುದರ್ಶನವೆಂದರೇನು?

ಉ.—ನೇತ್ರಗಳ ಹೊರತು ಅನ್ಯ ಇಂದ್ರಿಯ ಹಾಗು ಮನಸುಗಳಿಂದ ಆಗುವ, ಮತ್ತು ಮತಿಜ್ಞಾನಕ್ಕಿಂತ ಮೊದಲು ಪ್ರಾಪ್ತವಾಗುವ ಸಾಮಾನ್ಯ ಅವಲೋಕನಕ್ಕೆ ಅಚಕ್ಷುದರ್ಶನವೆನ್ನುತ್ತಾರೆ.

೨೧೪ ಪ್ರ.—ಅವಧಿದರ್ಶನವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಅವಧಿಜ್ಞಾನಕ್ಕಿಂತ ಮೊದಲು ಆಗುವ ಸಾಮಾನ್ಯ ಅವಲೋಕನಕ್ಕೆ ಅವಧಿದರ್ಶನವೆನ್ನುತ್ತಾರೆ.

೨೧೫ ಪ್ರ.—ಕೇವಲದರ್ಶನವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಕೇವಲಜ್ಞಾನದ ಕೂಡ ಆಗುವ ಸಾಮಾನ್ಯ ಅವಲೋಕನಕ್ಕೆ ಕೇವಲದರ್ಶನವೆನ್ನುವರು.

೨೧೬ ಪ್ರ.—ಸಮ್ಯಕ್ತ್ವಗುಣವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಗುಣವು ಪ್ರಕಟವಾದರೆ, ನಮ್ಮ ಶುದ್ಧ ಆತ್ಮದ ಪ್ರತಿಭಾಸ (ಜ್ಞಾನ) ವಾಗುವದೋ, ಅದಕ್ಕೆ ಸಮ್ಯಕ್ತ್ವಗುಣ ಅನ್ನುತ್ತಾರೆ.

೨೧೭ ಪ್ರ.—ಚಾರಿತ್ರವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಬಾಹ್ಯ ಮತ್ತು ಅಭ್ಯಂತರಕ್ರಿಯೆಯ ನಿರೋಧಮಾಡುವದರಿಂದ ಉತ್ಪನ್ನವಾಗುವ ಆತ್ಮದ ಶುದ್ಧಿವಿಶೇಷಕ್ಕೆ ಚಾರಿತ್ರ ಅನ್ನುವರು.

೨೧೮ ಪ್ರ.—ಬಾಹ್ಯಕ್ರಿಯೆ ಅಂದರೇನು?

ಉ.—ಹಿಂಸೆಮಾಡುವದು, ಕಳವುಮಾಡುವದು, ಸುಳ್ಳಾಡುವದು, ಮೈಥುನಸೇವನೆ, ಮತ್ತು ಪರಿಗ್ರಹ ಬೆಳಿಸುವದು ಇವಕ್ಕೆ ಬಾಹ್ಯಕ್ರಿಯೆ ಅನ್ನುವರು.

೨೧೯ ಪ್ರ.—ಅಭ್ಯಂತರಕ್ರಿಯೆ ಅಂದರೇನು?

ಉ.—ಯೋಗ ಮತ್ತು ಕಷಾಯಗಳಿಗೆ ಅಭ್ಯಂತರಕ್ರಿಯೆ ಅನ್ನುತ್ತಾರೆ.

೨೨೦ ಪ್ರ.—ಯೋಗವೆಂದು ಯಾತಕ್ಕೆ ಅನ್ನುವರು?

ಉ.—ಮನೋವಾಕ್ಕಾಯಗಳ ನಿಮಿತ್ತದಿಂದ ಆತ್ಮದ ಪ್ರದೇಶವು ಚಂಚಲವಾಗುವದೇ ಯೋಗವು.

೨೨೧ ಪ್ರ.—ಕಷಾಯವೆಂದು ಯಾತಕ್ಕೆ ಅನ್ನುವರು?

ಉ.— ಕ್ರೋಧ-ಮಾನ-ಮಾಯಾ-ಲೋಭರೂಪಿ ಆತ್ಮದ ವಿಭಾವಪರಿಣಾಮಕ್ಕೆ ಕಷಾಯ ಅನ್ನುವರು?

೨೨೨ ಪ್ರ.—ಚಾರಿತ್ರದಲ್ಲಿ ಎಷ್ಟು ಭೇದಗಳು?

ಉ.—ನಾಲ್ಕು ಭೇದಗಳು. ಅವು:—೧ ಸ್ವರೂಪಾಚರಣ

ಚಾರಿತ್ರ, ೨ ದೇಶಚಾರಿತ್ರ, ೩ ಸಕಲಚಾರಿತ್ರ, ೪ ಯಥಾಖ್ಯಾತಚಾರಿತ್ರ.

೨೨೩ ಪ್ರ.—ಸ್ವರೂಪಾಚರಣ ಚಾರಿತ್ರ ಅಂದರೇನು?

ಉ.—ಶುದ್ಧಾತ್ಮಾನುಭವನದಿಂದ ಅವಿನಾಭಾವಿಯಾಗಿರುವ ಚಾರಿತ್ರವಿಶೇಷಕ್ಕೆ ಸ್ವರೂಪಾಚರಣ ಚಾರಿತ್ರ ಅನ್ನುವರು.

೨೨೪ ಪ್ರ.—ದೇಶಚಾರಿತ್ರವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಶ್ರಾವಕರ ವ್ರತಕ್ಕೆ ದೇಶಚಾರಿತ್ರ ಅನ್ನುವರು.

೨೨೫ ಪ್ರ.—ಸಕಲಚಾರಿತ್ರ ಅಂದರೇನು?

ಉ.—ಮುನಿಗಳ ವ್ರತಕ್ಕೆ ಸಕಲಚಾರಿತ್ರ ಅನ್ನುತ್ತಾರೆ.

೨೨೬ ಪ್ರ.—ಯಥಾಖ್ಯಾತಚಾರಿತ್ರವೆಂದು ಯಾತಕ್ಕೆ ಅನ್ನುವರು?

ಉ.—ಕಷಾಯದ ಸಂಪೂರ್ಣ ಅಭಾವದಿಂದ ಉತ್ಪನ್ನವಾಗುವ ಆತ್ಮದ ಶುದ್ಧಿವಿಶೇಷಕ್ಕೆ ಯಥಾಖ್ಯಾತಚಾರಿತ್ರ ಅನ್ನುವರು.

೨೨೭ ಪ್ರ.—ಸುಖವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಆನಂದಸ್ವರೂಪಿ ಆತ್ಮದ ಪರಿಣಾಮವಿಶೇಷಕ್ಕೆ ಸುಖವೆನ್ನುವರು.

೨೨೮ ಪ್ರ.—ವೀರ್ಯ ಅಂದರೇನು?

ಉ.—ಆತ್ಮದ ಶಕ್ತಿಗೆ ವೀರ್ಯ ಅನ್ನುವರು.

೨೨೯ ಪ್ರ.—ಭವ್ಯತ್ವಗುಣವೆಂದು ಯಾತಕ್ಕೆ ಅನುತ್ತಾರೆ?

ಉ.—ಯಾವ ಶಕ್ತಿಯ ನಿಮಿತ್ತದಿಂದ ಆತ್ಮದಲ್ಲಿ ಸಮ್ಯಗ್ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರಗಳನ್ನು ಪ್ರಕಟಮಾಡುವ ಯೋಗ್ಯತೆ ಬರುವದೋ, ಅದಕ್ಕೆ ಭವ್ಯತ್ವಗುಣ ಅನ್ನುತ್ತಾರೆ.

೨೩೦ ಪ್ರ.—ಅಭವ್ಯತ್ವಗುಣವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಶಕ್ತಿಯ ನಿಮಿತ್ತದಿಂದ ಆತ್ಮದಲ್ಲಿ ಸಮ್ಯಗ್ದರ್ಶನಾದಿ ಗುಣಗಳು ಪ್ರಕಟವಾಗುವದಿಲ್ಲವೋ, ಆ ಶಕ್ತಿಗೆ ಅಭವ್ಯತ್ವಗುಣ ಅನ್ನುತ್ತಾರೆ.

೨೩೧ ಪ್ರ.—ಜೀವತ್ವಗುಣ ಅಂದರೇನು?

ಉ.—ಯಾವ ಶಕ್ತಿಯ ನಿಮಿತ್ತದಿಂದ ಆತ್ಮವು ಪ್ರಾಣಧಾರಣಮಾಡುವದೋ, ಅದಕ್ಕೆ ಜೀವತ್ವಗುಣ ಅನ್ನುತ್ತಾರೆ.

೨೩೨ ಪ್ರ.—ಪ್ರಾಣ ಅಂದರೇನು?

ಉ.—ಯಾತರ ಸಂಯೋಗದಿಂದ ಈ ಜೀವವು ಜೀವನಾವಸ್ಥೆಯನ್ನು ಹೊಂದುವದೋ, ಮತ್ತು ಯಾತರ ವಿಯೋಗದಿಂದ ಮರಣಾವಸ್ಥೆಯನ್ನು ಪಡೆಯುವದೋ ಅದಕ್ಕೆ ಪ್ರಾಣ ಅನ್ನುತ್ತಾರೆ.

೨೩೩ ಪ್ರ.—ಪ್ರಾಣದಲ್ಲಿ ಭೇದಗಳೆಷ್ಟು?

ಉ.—ಎರಡು. ಒಂದು ದ್ರವ್ಯಪ್ರಾಣ, ಮತ್ತೊಂದು ಭಾವ ಪ್ರಾಣ.

೨೩೪ ಪ್ರ.—ದ್ರವ್ಯಪ್ರಾಣದಲ್ಲಿ ಭೇದವಳೆಷ್ಟು?

ಉ.—ಹತ್ತುಭೇದಗಳು. ಅವು:—ಮನ, ವಚನ, ಕಾಯ, ಸ್ಪರ್ಶೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಶ್ರೋತ್ರೇಂದ್ರಿಯ, ಶ್ವಾಸೋಛ್ವಾಸ ಮತ್ತು ಆಯು.

೨೩೫ ಪ್ರ.—ಭಾವಪ್ರಾಣ ಅಂದರೇನು?

ಉ.—ಆತ್ಮದ ಚೈತನ್ಯ ಮತ್ತು ಬಲ ಈ ಗುಣಗಳಿಗೆ ಭಾವ ಪ್ರಾಣ ಅನ್ನುತ್ತಾರೆ.

೨೩೬ ಪ್ರ.—ಯಾವ ಯಾವ ಜೀವಿಗಳಿಗೆ ಎಷ್ಟೆಷ್ಟು ಪ್ರಾಣಗಳಿರತ್ತವೆ?

ಉ.—ಏಕೇಂದ್ರಿಯ ಜೀವಿಗೆ ನಾಲ್ಕು ಪ್ರಾಣಗಳಿರುವವು. ಅವು:—ಸ್ಪರ್ಶೇಂದ್ರಿಯ, ಕಾಯಬಲ, ಶ್ವಾಸೋಛ್ವಾಸ ಮತ್ತು ಆಯು. ದ್ವೀಂದ್ರಿಯ ಜೀವಕ್ಕೆ ಆರು ಪ್ರಾಣಗಳಿರುವವು. ಅವು:—ಸ್ಪರ್ಶೇಂದ್ರಿಯ, ಕಾಯಬಲ, ಶ್ವಾಸೋಛ್ವಾಸ, ಆಯು, ರಸನೇಂದ್ರಿಯ ಮತ್ತು ವಚನ. ತ್ರೀಂದ್ರಿಯಕ್ಕೆ ಏಳುಪ್ರಾಣಗಳಿರುವವು. ಅವು:—ಮೊದಲು ಹೇಳಿದ ಆರು ಅಲ್ಲದೆ,

ಘ್ರಾಣೇಂದ್ರಿಯ ಮತ್ತೊಂದು. ಚತುರಿಂದ್ರಿಯಕ್ಕೆ ಎಂಟು ಪ್ರಾಣಗಳಿರುತ್ತವೆ. ಅವು:— ಮೊದಲಿನ ಏಳು ಅಲ್ಲದೆ, ಚಕ್ಷುರಿಂದ್ರಿಯ ಮತ್ತೊಂದು. ಅಸೈನೀ ಪಂಚೇಂದ್ರಿಯ ಜೀವಕ್ಕೆ ಒಂಬತ್ತು ಪ್ರಾಣಗಳು. ಅವು:— ಮೊದಲಿನವು ಎಂಟು ಅಲ್ಲದೆ, ಶ್ರೋತ್ರೇಂದ್ರಿಯ ಮತ್ತೊಂದು. ಸೈನೀಪಂಚೇಂದ್ರಿಯಕ್ಕೆ ಹತ್ತು ಪ್ರಾಣಗಳು:—ಮೊದಲು ಹೇಳಿದವು ಒಂಬತ್ತು ಮತ್ತು ಇನ್ನೊಂದು ಮನ.

೨೩೭ ಪ್ರ.—( अ ) ಭಾವಪ್ರಾಣದಲ್ಲಿ ಭೇದಗಳೆಷ್ಟು?

ಉ.—ಎರಡು. ೧ ಭಾವೇಂದ್ರಿಯ ಮತ್ತು ೨ ಬಲಪ್ರಾಣ.

ಪ್ರ.—( ब ) ಭಾವೇಂದ್ರಿಯದಲ್ಲಿ ಭೇದಗಳೆಷ್ಟು?

ಉ.—ಐದು. ಅವು:—ಸ್ಪರ್ಶನ, ರಸನ, ಘ್ರಾಣ, ಚಕ್ಷು ಮತ್ತು ಶ್ರೋತ್ರ.

೨೩೮ ಪ್ರ.—ಬಲಪ್ರಾಣದಲ್ಲಿ ಭೇದಗಳೆಷ್ಟು?

ಉ.—ಮೂರು. ಅವು:— ಮನೋಬಲ, ವಚನಬಲ, ಕಾಯಬಲ.

೨೩೯ ಪ್ರ.—ವೈಭಾವಿಕಗುಣ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಶಕ್ತಿಯ ನಿಮಿತ್ತದಿಂದ ಬೇರೆ ದ್ರವ್ಯದ ಸಂಬಂಧವಾದರೆ, ಆತ್ಮದಲ್ಲಿ ವಿಭಾವಪರಿಣತಿಯಾಗುವದೋ, ಅದಕ್ಕೆ ವೈಭಾವಿಕಗುಣ ಅನ್ನುತ್ತಾರೆ.

## ಪ್ರತಿಜೀವೀ ಗುಣ.

೨೪೦ ಪ್ರ.— ಅವ್ಯಾಬಾಧಪ್ರತಿಜೀವೀಗುಣ ಎಂದು ಯಾತಕ್ಕೆ ಅನ್ನುತ್ತಾರೆ?

ಉ.--ಸಾತಾ ಮತ್ತು ಅಸಾತಾಸ್ವರೂಪಿ ಆಕುಲತೆಯ ಅಭಾವಕ್ಕೆ ಅವ್ಯಾಬಾಧ ಪ್ರತಿಜೀವೀಗುಣ ಅನ್ನುತ್ತಾರೆ?

೨೪೧ ಪ್ರ.--ಅವಗಾಹ ಪ್ರತಿಜೀವೀಗುಣ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಪಾರತಂತ್ರ್ಯಯ ಅಭಾವಕ್ಕೆ ಅವಗಾಹಪ್ರತಿಜೀವೀ ಗುಣ ಅನ್ನುವರು.

೨೪೨ ಪ್ರ.—ಅಗುರುಲಘುತ್ವ ಪ್ರತಿಜೀವೀಗುಣ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಉಚ್ಚತ್ವ ಮತ್ತು ನೀಚತ್ವಗಳ ಅಭಾವಕ್ಕೆ ಅಗುರುಲಘುತ್ವ ಪ್ರತಿಜೀವೀಗುಣ ಅನ್ನುತ್ತಾರೆ.

೨೪೩ ಪ್ರ.—ಸೂಕ್ಷ್ಮತ್ವ ಪ್ರತಿಜೀವೀಗುಣ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಇಂದ್ರಿಯಗಳ ವಿಷಯಸ್ವರೂಪಿ ಸ್ಥೂಲತೆಯ ಅಭಾವಕ್ಕೆ ಸೂಕ್ಷ್ಮತ್ವ ಪ್ರತಿಜೀವೀಗುಣ ಅನ್ನುವರು.

---

# ೩ನೆಯ ಅಧ್ಯಾಯ.

೨೪೪ ಪ್ರ.—ಜೀವದಲ್ಲಿ ಭೇದಗಳೆಷ್ಟು?

ಉ.—ಎರಡು. (೧) ಸಂಸಾರಿ ಮತ್ತು (೨) ಮುಕ್ತ.

೨೪೫ ಪ್ರ.—ಸಂಸಾರಿಜೀವ ಎಂದು ಯಾತಕ್ಕೆ ಅನ್ನುವರು?

ಉ.—ಕರ್ಮಸಹಿತವಾದ ಜೀವಕ್ಕೆ ಸಂಸಾರಿಜೀವ ಅನ್ನುವರು.

೨೪೬ ಪ್ರ.—ಮುಕ್ತಜೀವ ಅಂದರೇನು?

ಉ.—ಕರ್ಮರಹಿತವಾದ ಜೀವಕ್ಕೆ ಮುಕ್ತಜೀವ ಅನ್ನುವರು.

೨೪೭ ಪ್ರ.—ಕರ್ಮ ಅಂದರೇನು?

ಉ.—ಜೀವಿಗಳ ರಾಗದ್ವೇಷಾದಿ ಪರಿಣಾಮಗಳ ನಿಮಿತ್ತದಿಂದ ಕಾರ್ಮಾಣ ವರ್ಗಣಾರೂಪಿ ಪುದ್ಗಲಸ್ಕಂಧ ಜೀವದೊಡನೆ ಬಂಧವಾಗುವದೇ ಕರ್ಮವು.

೨೪೮ ಪ್ರ.—ಬಂಧದಲ್ಲಿ ಭೇದಗಳೆಷ್ಟು?

ಉ.—ನಾಲ್ಕು. (೧) ಪ್ರಕೃತಿಬಂಧ (೨) ಪ್ರದೇಶಬಂಧ (೩) ಸ್ಥಿತಿಬಂಧ (೪) ಅನುಭಾಗಬಂಧ.

೨೪೯ ಪ್ರ.—ಈ ನಾಲ್ಕೂ ಪ್ರಕಾರದ ಬಂಧಗಳಿಗೆ ಕಾರಣಗಳೇನು?

ಉ.—ಪ್ರಕೃತಿ ಹಾಗು ಪ್ರದೇಶಬಂಧಗಳು ಯೋಗದಿಂದ ಆಗುತ್ತವೆ. ಸ್ಥಿತಿ ಹಾಗು ಅನುಭಾಗಬಂಧಗಳು ಕಷಾಯದಿಂದ ಆಗುತ್ತವೆ.

೨೫೦ ಪ್ರ.—ಪ್ರಕೃತಿಬಂಧ ಅಂದರೇನು?

ಉ.—ಕರ್ಮದಲ್ಲಿ ಆತ್ಮಘಾತ ಮಾಡುವ ಶಕ್ತಿಯು ಉದಯವಾಗುತ್ತದೆ. ಅದಕ್ಕೆ ಪ್ರಕೃತಿಬಂಧ ಅನ್ನುವರು.

೨೫೧ ಪ್ರ.—ಪ್ರಕೃತಿಬಂಧದಲ್ಲಿ ಎಷ್ಟು ಭೇದಗಳು?

ಉ.—ಎಂಟು. ೧ ಜ್ಞಾನಾವರಣ, ೨ ದರ್ಶನಾವರಣ, ೩ ವೇದನೀಯ, ೪ ಮೋಹನೀಯ, ೫ ಆಯು, ೬ ನಾಮ, ೭ ಗೋತ್ರ ಮತ್ತು ೮ ಅಂತರಾಯ.

೨೫೨ ಪ್ರ.—ಜ್ಞಾನಾವರಣ ಅಂದರೇನು?

ಉ.—ಯಾವ ಕರ್ಮವು ಆತ್ಮದ ಜ್ಞಾನಗುಣವನ್ನು ನಾಶ ಮಾಡುತ್ತದೋ, ಅದು ಜ್ಞಾನಾವರಣ ಕರ್ಮವು.

೨೫೩ ಪ್ರ.—ಜ್ಞಾನಾವರಣ ಕರ್ಮದಲ್ಲಿ ಭೇದಗಳೆಷ್ಟು?

ಉ.—ಐದು ಭೇದಗಳು. ೧ ಮತಿಜ್ಞಾನಾವರಣ, ೨ ಶ್ರುತಜ್ಞಾನಾವರಣ, ೩ ಅವಧಿಜ್ಞಾನಾವರಣ, ೪ ಮನಃಪರ್ಯಯಜ್ಞಾನಾವರಣ ಮತ್ತು ೫ ಕೇವಲಜ್ಞಾನಾವರಣ.

೨೫೪ ಪ್ರ.—ದರ್ಶನಾವರಣಕರ್ಮ ಯಾತಕ್ಕೆ ಅನ್ನುವರು.

ಉ.—ಯಾವದು ಆತ್ಮದ ದರ್ಶನಗುಣವನ್ನು ಘಾತಮಾಡುವದೋ, ಅದಕ್ಕೆ ದರ್ಶನಾವರಣ ಕರ್ಮ ಅನ್ನುವರು.

೨೫೫ ಪ್ರ.—ದರ್ಶನಾವರಣ ಕರ್ಮದಲ್ಲಿ ಭೇದಗಳೆಷ್ಟು?

ಉ.—ಒಂಬತ್ತು. ೧ ಚಕ್ಷುದರ್ಶನಾವರಣ, ೨ ಅಚಕ್ಷುದರ್ಶನಾವರಣ, ೩ ಅವಧಿದರ್ಶನಾವರಣ, ೪ ಕೇವಲ ದರ್ಶನಾವರಣ, ೫ ನಿದ್ರಾ, ೬ ನಿದ್ರಾನಿದ್ರಾ, ೭ ಪ್ರಜಲಾ, ೮ ಪ್ರಜಲಾ ಪ್ರಜಲಾ, ೯ ಸ್ತ್ಯಾನಗೃದ್ಧಿ.

೨೫೬ ಪ್ರ.—ವೇದನೀಯಕರ್ಮ ಅಂದರೇನು?

ಉ.—ಯಾವ ಕರ್ಮದ ಫಲದಿಂದ ಜೀವಕ್ಕೆ ಆಕುಲತೆಯು ಪ್ರಾಪ್ತವಾಗುತ್ತದೋ, ಅರ್ಥಾತ್ ಯಾವ ಕರ್ಮವು ಆತ್ಮದ ಅವ್ಯಾಬಾಧಗುಣವನ್ನು ಘಾತಮಾಡುತ್ತದೋ, ಅದಕ್ಕೆ ವೇದನೀಯ ಕರ್ಮವೆನ್ನುವರು.

೨೫೭ ಪ್ರ.—ವೇದನೀಯ ಕರ್ಮಗಳು ಎಷ್ಟು ಪ್ರಕಾರದವಿರುವವು?

ಉ.—ಎರಡು ಪ್ರಕಾರದವು. (೧) ಸಾತಾವೇದನೀಯ, (೨) ಅಸಾತಾವೇದನೀಯ.

೨೫೮ ಪ್ರ.—ಮೋಹನೀಯ ಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವದು ಆತ್ಮದ ಸಮ್ಯಕ್ತ್ವ ಹಾಗು ಚಾರಿತ್ರ

ಗುಣಗಳನ್ನು ಘಾತಮಾಡುತ್ತದೋ ಅದಕ್ಕೆ ಮೋಹನೀಯ ಕರ್ಮವೆನ್ನುವರು.

೧೫೯ ಪ್ರ.—ಮೋಹನೀಯ ಕರ್ಮದಲ್ಲಿ ಎಷ್ಟು ಭೇದಗಳು?

ಉ.—ಎರಡು. (೧) ದರ್ಶನಮೋಹನೀಯ ಮತ್ತು (೨) ಚಾರಿತ್ರಮೋಹನೀಯ.

೧೬೦ ಪ್ರ.—ದರ್ಶನಮೋಹನೀಯ ಕರ್ಮ ಅಂದರೇನು?

ಉ.—ಯಾವದು ಆತ್ಮದ ಸಮ್ಯಕ್ತ್ವ ಗುಣವನ್ನು ಘಾತ ಮಾಡುತ್ತದೋ ಅದಕ್ಕೆ ದರ್ಶನಮೋಹನೀಯ ಕರ್ಮವೆನ್ನುವರು.

೧೬೧ ಪ್ರ.—ದರ್ಶನಮೋಹನೀಯ ಕರ್ಮದಲ್ಲಿ ಭೇದಗಳೆಷ್ಟು?

ಉ.—ಮೂರು (೧) ಮಿಥ್ಯಾತ್ವ (೨) ಸಮ್ಯಕ್-ಮಿಥ್ಯಾತ್ವ ಮತ್ತು (೩) ಸಮ್ಯಗ್ಪ್ರಕೃತಿ.

೧೬೨ ಪ್ರ.—ಮಿಥ್ಯಾತ್ವ ಅಂದರೇನು?

ಉ.—ಯಾವ ಕರ್ಮದ ಉದಯದಿಂದ ಜೀವಿಗಳಿಗೆ ಅತತ್ವ ಶ್ರದ್ಧೆಯು ಆಗುವದೋ ಆ ಕರ್ಮದ ಉದಯಕ್ಕೆ ಮಿಥ್ಯಾತ್ವ ಅನ್ನುವರು.

೧೬೩ ಪ್ರ.—ಸಮ್ಯಗ್ ಮಿಥ್ಯಾತ್ವ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಜೀವಕ್ಕೆ ಮಿಶ್ರಪರಿಣಾಮಗಳಾಗುತ್ತವೆ, ಅಂದರೆ ಯಾವ ಪರಿಣಾಮ

ಕ್ಕೆ ಸಮ್ಯಕ್ತ್ವಸ್ವರೂಪಿ ಎಂದು ಅನ್ನಲಿಕ್ಕೂ ಬರುವದಿಲ್ಲ, ಹಾಗು ಮಿಥ್ಯಾತ್ವ ಸ್ವರೂಪಿ ಎಂದೂ ಅನ್ನಲಿಕ್ಕೆ ಬರುವದಿಲ್ಲ, ಅಂಥ ಕರ್ಮದ ಉದಯಕ್ಕೆ ಸಮ್ಯಗ್‌ಮಿಥ್ಯಾತ್ವ ಅನ್ನುವರು.

೨೬೪ ಪ್ರ.—ಸಮ್ಯಕ್‌ಪ್ರಕೃತಿ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಸಮ್ಯಕ್ತ್ವವು ಮೂಲೋತ್ಪಾಟನವಾಗದೆ, ಅದರಲ್ಲಿ ಚಲಮಲಾದಿ ದೋಷಗಳುತ್ಪನ್ನವಾಗುತ್ತವೆ. ಹೀಗೆ ಸಮ್ಯಕ್ತ್ವದಲ್ಲಿ ದೋಷವನ್ನುಂಟುಮಾಡುವ ಕರ್ಮದ ಉದಯಕ್ಕೆ ಸಮ್ಯಕ್ಪ್ರಕೃತಿ ಅನ್ನುವರು.

೨೬೫ ಪ್ರ.—ಚಾರಿತ್ರಮೋಹನೀಯ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮವು ಚಾರಿತ್ರಗುಣವನ್ನು ಘಾತಮಾಡುವದೋ, ಆ ಕರ್ಮಕ್ಕೆ ಚಾರಿತ್ರಮೋಹನೀಯವೆನ್ನುವರು.

೨೬೬ ಪ್ರ.—ಚಾರಿತ್ರಮೋಹನೀಯ ಕರ್ಮದಲ್ಲಿ ಭೇದಗಳೆಷ್ಟು?

ಉ.—ಎರಡು ೧ ಕಷಾಯ ಮತ್ತು ೨ ನೋಕಷಾಯ (ಕಿಂಚಿತ್‌ಕಷಾಯ).

೨೬೭ ಪ್ರ.—ಕಷಾಯದಲ್ಲಿ ಭೇದಗಳೆಷ್ಟು?

ಉ.—ಹದಿನಾರು ಭೇದಗಳಿರುವವು. ಅವು:—೧ ಅನಂತಾನುಬಂಧಿಕ್ರೋಧ, ೨ ಅನಂತಾನುಬಂಧಿಮಾನ, ೩ ಅನಂತಾನುಬಂಧಿಮಾಯಾ, ೪ ಅನಂತಾನುಬಂಧಿಲೋಭ, ೫ ಅಪ್ರತ್ಯಾಖ್ಯಾನಾವರಣಕ್ರೋಧ, ೬ ಅಪ್ರತ್ಯಾಖ್ಯಾನಾವರಣಮಾನ, ೭ ಅಪ್ರತ್ಯಾಖ್ಯಾನಾವರಣಮಾಯಾ, ೮ ಅಪ್ರತ್ಯಾಖ್ಯಾನಾವರಣಲೋಭ, ೯ ಪ್ರತ್ಯಾಖ್ಯಾನಾವರಣಕ್ರೋಧ, ೧೦ ಪ್ರತ್ಯಾಖ್ಯಾನಾವರಣಮಾನ, ೧೧ ಪ್ರತ್ಯಾಖ್ಯಾನಾವರಣಮಾಯಾ, ೧೨ ಪ್ರತ್ಯಾಖ್ಯಾನಾವರಣಲೋಭ, ೧೩ ಸಂಜ್ವನಕ್ರೋಧ, ೧೪ ಸಂಜ್ವಲನಮಾನ, ೧೫ ಸಂಜ್ವನಮಾಯಾ, ೧೬ ಸಂಜ್ವಲನಲೋಭ.

೨೬೮ ಪ್ರ.—ನೋಕಷಾಯದಲ್ಲಿ ಭೇದಗಳೆಷ್ಟು?

ಉ.—ಒಂಬತ್ತು ಅವು:—೧ ಹಾಸ್ಯ, ೨ ರತಿ, ೩ ಅರತಿ, ೪ ಶೋಕ, ೫ ಭಯ, ೬ ಜುಗುಪ್ಸಾ, ೭ ಪುರುಷವೇದ, ೮ ನಪುಂಸಕವೇದ.

೨೬೯ ಪ್ರ.—ಅನಂತಾನುಬಂಧಿಕ್ರೋಧ, ಮಾನ, ಮಾಯಾ, ಲೋಭ ಅಂದರೇನು?

5

ಉ.— ಯಾವು ಆತ್ಮದ ಸ್ವರೂಪಾಚರಣಚಾರಿತ್ರೆಗಳನ್ನು ಘಾತಮಾಡುತ್ತವೆ, ಅವಕ್ಕೆ ಅನಂತಾನುಬಂಧಿ ಕ್ರೋಧ, ಮಾನ, ಮಾಯಾ, ಲೋಭ ಅನ್ನುವರು.

೧೭೦ ಪ್ರ.--ಅಪ್ರತ್ಯಾಖ್ಯಾನಾವರಣ ಕ್ರೋಧ-ಮಾನ-ಮಾಯಾ-ಲೋಭ ಅಂದರೇನು?

ಉ.—ಯಾವು ಆತ್ಮದ ದೇಶಚಾರಿತ್ರಗಳನ್ನು ನಾಶಮಾಡುತ್ತವೆ. ಅವಕ್ಕೆ ಅಪ್ರತ್ಯಾಖ್ಯಾನಾವರಣ ಕ್ರೋಧ-ಮಾನ-ಮಾಯಾ-ಲೋಭ ಅನ್ನುವರು.

೧೭೧ ಪ್ರ.--ಪ್ರತ್ಯಾಖ್ಯಾನಾವರಣ ಕೋಧ-ಮಾನ-ಮಾಯಾ-ಲೋಭ ಅಂದರೇನು?

ಉ.--ಯಾವು ಆತ್ಮದ ಸಕಲಚಾರಿತ್ರಗಳನ್ನು ಘಾತಮಾಡುವವೋ, ಅವಕ್ಕೆ ಪ್ರತ್ಯಾಖ್ಯಾನಾವರಣ ಕ್ರೋಧ-ಮಾನ-ಮಾಯಾ-ಲೋಭ ಅನ್ನುವರು.

೧೭೨ ಪ್ರ.—ಸಂಜ್ವಲನ ಕ್ರೋಧ-ಮಾನ-ಮಾಯಾ-ಲೋಭ ಅಂದರೇನು?

ಉ.—ಯಾವು ಆತ್ಮದ ಯಥಾಖ್ಯಾತ ಚಾರಿತ್ರವನ್ನು ಘಾತಮಾಡುವವೋ, ಅವಕ್ಕೆ ಸಂಜ್ವಲನ ಕ್ರೋಧ-ಮಾನ-ಮಾಯಾ-ಲೋಭ ಅನ್ನುವರು.

೨೭೩ ಪ್ರ.--ಆಯುಕರ್ಮ ಅಂದರೇನು?

ಉ.—ಯಾವ ಕರ್ಮವು ಆತ್ಮನನ್ನು ನರಕ, ತಿರ್ಯಂಚ, ಮನುಷ್ಯ ಹಾಗು ದೇವ ಈ ಶರೀರಗಳಲ್ಲಿ ಸೇರಿಸಿ ಇಡುತ್ತದೋ, ಅದಕ್ಕೆ ಆಯುಕರ್ಮ ಅನ್ನುವರು. ಅರ್ಥಾತ್ ಆಯುಕರ್ಮವು ಆತ್ಮದ ಅವಗಾಹ ಗುಣವನ್ನು ಘಾತಮಾಡುವಂಥಾದ್ದದೆ.

೨೭೪ ಪ್ರ.—ಆಯುಕರ್ಮದಲ್ಲಿ ಎಷ್ಟು ಭೇದಗಳುಂಟು?

ಉ.—ನಾಲ್ಕು. ೧ ನರಕಾಯು, ೨ ತಿರ್ಯಂಚಾಯು, ೩ ಮನುಷ್ಯಾಯು, ೪ ದೇವಾಯು.

೨೭೫ ಪ್ರ.—ನಾಮಕರ್ಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.- ಯಾವ ಕರ್ಮವು ಜೀವಕ್ಕೆ ಗತಿ ಮೊದಲಾದ ಅನೇಕ ಸ್ವರೂಪಗಳ ಸ್ಥಿತಿಯನ್ನು ಧಾರಣಮಾಡುವ ಪ್ರಸಂಗವನ್ನು ತಂದುಕೊಡುವದೋ, ಅಥವಾ ಅನೇಕ ಪ್ರಕಾರದ ಶರೀರಗಳನ್ನು ಧರಿಸುತ್ತದೋ, ಅದಕ್ಕೆ ನಾಮಕರ್ಮ ಅನ್ನುತ್ತಾರೆ. ಈ ನಾಮ ಕರ್ಮವು ಆತ್ಮದ ಸೂಕ್ಷ್ಮತ್ವಗುಣವನ್ನು ಘಾತ ಮಾಡುತ್ತದೆ.

೨೭೬ ಪ್ರ.—ನಾಮಕರ್ಮದಲ್ಲಿ ಎಷ್ಟು ಭೇದಗಳುಂಟು?

ಉ.—೯೩ ಭೇದಗಳಿರುವವು:— ೪ ಗತಿ,—( ನರಕ, ತಿ ಯಂಚ, ಮನುಷ್ಯ, ದೇವ). ೫ ಜಾತಿ,—( ಏ ಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿ ಯ, ಪಂಚೇಂದ್ರಿಯ ). ೫ ಶರೀರ,—( ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಾಣ). ೩ ಅಂಗೋಪಾಂಗ,— ( ಔದಾರಿಕ, ವೈಕ್ರಿಯಕ, ಆಹಾರಕ). ೧ ನಿರ್ಮಾಣಕರ್ಮ, ೫ ಬಂಧನಕರ್ಮ ಗಳು,—(ಔದಾರಿಕ ಬಂಧನ, ವೈಕ್ರಿಯಕ ಬಂಧನ, ಆಹಾರಕಬಂಧನ, ತೈಜಸಬಂಧನ, ಕಾರ್ಮಾಣ ಬಂಧನ ). ೫ ಸಂಘಾತ,—( ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಾಣ). ೬ ಸಂಸ್ಥಾನ,— ( ಸಮಚತುರಸ್ರಸಂಸ್ಥಾನ, ನ್ಯಗ್ರೋಧ ಪರಿಮಂಡಲ ಸಂಸ್ಥಾನ, ಸ್ವಾತಿಸಂಸ್ಥಾನ, ಕುಬ್ಜಕಸಂಸ್ಥಾನ, ವಾ ಮನಸಂಸ್ಥಾನ, ಹುಂಡಕಸಂಸ್ಥಾನ ). ೬ ಸಂಹ ನನ,—( ವಜ್ರರ್ಷಭನಾರಾಚಸಂಹನನ, ವಜ್ರನಾ ರಾಜಸಂಹನನ, ನಾರಾಚಸಂಹನನ, ಅರ್ಧನಾರಾ ಚಸಂಹನನ, ಕೀಲಕಸಂಹನನ, ಅಸಂಪ್ರಾಪ್ತಾ ಸೃಪಾಟಿಕಾಸಂಹನನ ). ೫ ವರ್ಣ,—( ಕೃಷ್ಣ,

ನೀಲ, ರಕ್ತ, ಪೀತ, ಶ್ವೇತ). ೨ ಗಂಧಕರ್ಮ,—(ಸುಗಂಧ, ದುರ್ಗಂಧ). ೫ ರಸಕರ್ಮ,—( ಹುಳಿ, ಸವಿ, ವಿಷ, ಖಾರ, ಒಗರು). ೮ ಸ್ಪರ್ಶ,—(ಕಠೋರ, ಕೋಮಲ, ಹಗುರು, ಭಾರ, ತಣ್ಣಗೆ, ಬೆಚ್ಚಗೆ, ಸ್ನಿಗ್ಧ, ರುಕ್ಷ). ೪ ಆನುಪೂರ್ವ್ಯ,— (ನರಕ, ತಿರ್ಯಂಚ, ಮನುಷ್ಯ, ದೇವ). ೧ ಅಗುರುಲಘುಕರ್ಮ, ೧ ಉಪಘಾತ, ೧ ಪರಿಘಾತ, ೧ ಆತಾಪಕರ್ಮ, ೧ ಉದ್ಯೋತಕರ್ಮ, ೨ ವಿಹಾಯೋಗತಿ,—(ಮನೋಜ್ಞ, ಅಮನೋಜ್ಞ). ೧ ಉಚ್ಛ್ವಾಸ, ೧ ತ್ರಸ, ೧ ಸ್ಥಾವರ, ೧ ಬಾದರ, ೧ ಸೂಕ್ಷ್ಮ, ೧ ಪರ್ಯಾಪ್ತಕರ್ಮ, ೧ ಅಪರ್ಯಾಪ್ತಕರ್ಮ, ೧ ಪ್ರತ್ಯೇಕನಾಮಕರ್ಮ, ೧ ಸಾಧಾರಣನಾಮಕರ್ಮ, ೧ ಸ್ಥಿರನಾಮಕರ್ಮ, ೧ ಅಸ್ಥಿರನಾಮಕರ್ಮ, ೧ ಶುಭನಾಮಕರ್ಮ, ೧ ಅಶುಭನಾಮಕರ್ಮ, ೧ ಶುಭಗನಾಮಕರ್ಮ ೧ ಶುರ್ಭಗನಾಮಕರ್ಮ, ೧ ಸುಸ್ವರನಾಮಕರ್ಮ, ೧ ದುಃಸ್ವರನಾಮಕರ್ಮ, ೧ ಆದೇಯನಾಮಕರ್ಮ, ೧ ಯಶಃಕೀರ್ತಿನಾಮಕರ್ಮ, ೧ ಅಯುಶಃಕೀರ್ತಿನಾಮಕರ್ಮ, ೧ ತೀರ್ಥಕರನಾಮಕರ್ಮ.

೧೭೭ ಪ್ರ.—ಗತಿನಾಮಕರ್ಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವಕರ್ಮವು ಜೀವದ ಆಕಾರವನ್ನು ನಾರಕಿ, ತಿರ್ಯಂಚ, ಮನುಷ್ಯ ಹಾಗು ದೇವ ಇವುಗಳಂತೆ ಹುಟ್ಟಿಸುತ್ತದೋ, ಅದಕ್ಕೆ ಗತಿನಾಮಕ ಕರ್ಮವೆನ್ನುತ್ತಾರೆ.

೧೭೮ ಪ್ರ.—ಜಾತಿ ಅಂದರೇನು?

ಉ.—ನಿರ್ದೋಷದಂಥ ಸಮತ್ವದ ಮೇಲಿಂದ ಪದಾರ್ಥದಲ್ಲಿ ಐಕ್ಯವನ್ನು ತರುವಂಥ ವಿಶೇಷಕ್ಕೆ ಜಾತಿ ಅನ್ನುವರು. ಈ ವಿಶೇಷವು ಸದೃಶಧರ್ಮವುಳ್ಳಂಥ ಪದಾರ್ಥಗಳನ್ನೇ ಗ್ರಹಣ ಮಾಡುತ್ತದೆ.

೧೭೯ ಪ್ರ.—ಜಾತಿನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಜೀವವು, ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯ ಎಂದು ಅನಿಸಿಕೊಳ್ಳುವದೋ ಅದಕ್ಕೆ ಜಾತಿನಾಮಕರ್ಮವೆನ್ನುವರು.

೧೮೦ ಪ್ರ.—ಶರೀರನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಆತ್ಮಕ್ಕೆ ಔದಾರಿಕಾದಿ ಶರೀರಗಳ ರಚನೆಯುಂಟಾಗುವದೋ, ಅದಕ್ಕೆ ಶರೀರನಾಮಕರ್ಮವೆನ್ನುವರು.

೨೮೧ ಪ್ರ.—ನಿರ್ಮಾಣಕರ್ಮವೆಂದು ಯಾತಕ್ಕೆ ಅನ್ನುವರು?
ಉ.—ಯಾವ ಕರ್ಮದ ಉದಯದಿಂದ ಅಂಗೋಪಾಂಗಗಳ ಯಥಾಯೋಗ್ಯವಾದ ರಚನೆಯುಂಟಾಗುವದೋ, ಅದಕ್ಕೆ ನಿರ್ಮಾಣಕರ್ಮ ಅನ್ನುವರು.

೨೮೨ ಪ್ರ.—ಬಂಧನನಾಮಕರ್ಮವೆಂದು ಯಾತಕ್ಕೆ ಅನ್ನುವರು?
ಉ.—ಯಾವ ಕರ್ಮದ ಉದಯದಿಂದ ಔದಾರಿಕಾದಿ ಶರೀರಗಳ ಪರಮಾಣುಗಳ ಪರಸ್ಪರ ಸಂಬಂಧವಾಗುವದೋ, ಅದಕ್ಕೆ ಬಂಧನನಾಮಕರ್ಮವೆನ್ನುವರು.

೨೮೩ ಪ್ರ.—ಸಂಘಾತನಾಮಕರ್ಮವೆಂದು ಯಾತಕ್ಕೆ ಅನ್ನುವರು?
ಉ.—ಯಾವ ಕರ್ಮದ ಉದಯದಿಂದ ಔದಾರಿಕಾದಿ ಶರೀರಗಳ ಪರಮಾಣುಗಳ ಛಿದ್ರರಹಿತ ಏಕತ್ವವುಂಟಾಗುವದೋ, ಅದಕ್ಕೆ ಸಂಘಾತನಾಮಕರ್ಮ ಅನ್ನುವರು.

೨೮೪ ಪ್ರ.— ಸಂಸ್ಥಾನನಾಮಕರ್ಮವೆಂದು ಯಾತಕ್ಕೆ ಅನ್ನುವರು?
ಉ.—ಯಾವ ಕರ್ಮದ ಉದಯದಿಂದ ಶರೀರದ ಆಕೃತಿಯುಂಟಾಗುವದೋ, ಅದಕ್ಕೆ ಸಂಸ್ಥಾನನಾಮಕರ್ಮವೆನ್ನುವರು.

೨೮೫ ಪ್ರ.—ಸಮಚತುರಸ್ರಸಂಸ್ಥಾನವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಶರೀರದ ಭಾಗವು ಮೇಲೆ, ಕೆಳಗೆ, ನಡುವೆ ಇವೆಲ್ಲ ಸಮಪ್ರಮಾಣದಲ್ಲಿ ಉಂಟಾಗಿ ಅವಯುವಗಳ ರಚನೆಯಾಗುವದೋ, ಅದಕ್ಕೆ ಸಮಚತುರಸ್ರಸಂಸ್ಥಾನ ಅನ್ನುವರು.

೨೮೬ ಪ್ರ.— ನ್ಯಗ್ರೋಧಪರಿಮಂಡಲವೆಂದು ಯಾತಕ್ಕೆ ಅನ್ನುವರು.

ಉ.—ಯಾವ ಕರ್ಮದ ಉದಯದಿಂದ ಜೀವದ ಶರೀರವು ದೊಡ್ಡ ವೃಕ್ಷದಂತೆಯೂ, ನಾಭಿಯಿಂದ ಕೆಳಗಿನ ಅವಯುವಗಳು ಸಣ್ಣವಾಗಿಯೂ, ಮೇಲಿನವು ದೊಡ್ಡವಾಗಿಯೂ ಉಂಟಾಗುತ್ತದೋ, ಅದಕ್ಕೆ ನ್ಯಗ್ರೋಧಪರಿಮಂಡಲಸಂಸ್ಥಾನ ಅನ್ನುತ್ತಾರೆ.

೨೮೭ ಪ್ರ.—ಸ್ವಾತಿಸಂಸ್ಥಾನವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಮೇಲಿನ ಪ್ರಶ್ನೆಯಲ್ಲಿ ವರ್ಣಿಸಿದ ಶರೀರದ ವಿರುದ್ಧ ಅಂದರೆ ಮೇಲಿನ ಅವಯುವ ಸಣ್ಣವು ಇದ್ದು, ಕೆಳಗಿನವು ದೊಡ್ಡವು ಹೀಗೆ ಯಾತರ ಯೋಗದಿಂದ

ಉಂಟಾಗುತ್ತದೆಯೋ ಅದಕ್ಕೆ ಸ್ವಾತಿಸಂಸ್ಥಾನ ಅನ್ನುವರು.

೨೮೮ ಪ್ರ.--ಕುಬ್ಜಸಂಸ್ಥಾನ ಅಂದರೇನು?

ಉ.--ಯಾವ ಕರ್ಮದ ಉದಯದಿಂದ ಕುಬ್ಜಶರೀರವು ಪ್ರಾಪ್ತವಾಗುವದೋ, ಅದಕ್ಕೆ ಕುಬ್ಜಸಂಸ್ಥಾನ ಅನ್ನುವರು.

೨೮೯ ಪ್ರ.—ವಾಮನ ಸಂಸ್ಥಾನ ಅಂದರೇನು?

ಉ.—ಯಾವ ಕರ್ಮದ ಉದಯದಿಂದ ಗಿಡ್ಡ ಶರೀರವು ಪ್ರಾಪ್ತವಾಗುವದೋ, ಅದಕ್ಕೆ ವಾಮನಸಂಸ್ಥಾನ ವೆನ್ನುವರು.

೨೯೦ ಪ್ರ. –ಹುಂಡಕಸಂಸ್ಥಾನ ಅಂದರೇನು?

ಉ.—ಯಾವ ಕರ್ಮದ ಉದಯದಿಂದ ಶರೀರಕ್ಕೆ ಅಂಗೋಪಾಂಗಗಳು ಇರುವದಿಲ್ಲವೋ, ಅದಕ್ಕೆ ಹುಂಡಕ ಸಂಸ್ಥಾನ ಅನ್ನುವರು.

೨೯೧ ಪ್ರ.--ಸಂಹನನನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಎಲುವುಗಳ ಬಂಧನವಾಗುವದೋ, ಅದಕ್ಕೆ ಸಂಹನನನಾಮಕರ್ಮ ಅನ್ನುವರು.

೨೯೨ ಪ್ರ.—ವಜ್ರರ್ಷಭನಾರಾಚಸಂಹನನ ಅಂದರೇನು?

ಉ.—ಯಾವ ಕರ್ಮದ ಉದಯದಿಂದ ಅಸ್ತಿ, ವೇಷ್ಟನ, ಹಾಗು ಕೀಲಿಕಾ ಇವು ವಜ್ರಸ್ವರೂಪವುಳ್ಳವುಗಳಾಗುವವೋ, ಅದಕ್ಕೆ ವಜ್ರರ್ಷಭನಾರಾಚಸಂಹನನ ಅನ್ನುವರು.

೨೯೩ ಪ್ರ.—ವಜ್ರನಾರಾಚಸಂಹನನ ಅಂದರೇನು?

ಉ.—ಯಾವ ಕರ್ಮದ ಉದಯದಿಂದ ಅಸ್ತಿ ಹಾಗು ಕೀಲಿಕಾ ಇವೆರಡೇ ವಜ್ರದವಾಗುತ್ತ, ವೇಷ ನ ಮಾತ್ರ ವಜ್ರದ್ದಾಗುವದಿಲ್ಲ, ಅದಕ್ಕೆ ವಜ್ರನಾರಾಚಸಂಹನನ ಅನ್ನುತ್ತಾರೆ.

೨೯೪ ಪ್ರ.—ನಾರಾಚಸಂಹನನವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮದ ಉದಯದಿಂದ ವೇಷ್ಟನ ಹಾಗು ಕೀಲಿಕಾ ಇವುಗಳಿಂದ ಯುಕ್ತವಾದ ಎಲುವು ಉಂಟಾಗುತ್ತದೆಯೋ, ಅದಕ್ಕೆ ನಾರಾಚಸಂಹನನ ಅನ್ನುವರು.

೨೯೫ ಪ್ರ.—ಅರ್ಧನಾರಾಚಸಂಹನನವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮದ ಉದಯದಿಂದ ಎಲುವಿನ ಸಂಧಿ

ಗಳು ಅರ್ಧಕೀಲಿತವಾಗಿ ಉಂಟಾಗುವವೋ, ಅದಕ್ಕೆ ಅರ್ಧನಾರಾಚಸಂಹನನ ಅನ್ನುವರು.

೨೯೬ ಪ್ರ.—ಕೀಲಕಸಂಹನನವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಎಲುವುಗಳು ಪರಸ್ಪರ ಕೀಲಿತವಾಗುವವೋ, ಅದಕ್ಕೆ ಕೀಲಕಸಂಹನನ ಅನ್ನುವರು.

೨೯೭ ಪ್ರ.—ಅಸಂಪ್ರಾಪ್ತಾಸೃಪಾಟಿಕಾಸಂಹನನ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಬೇರೆ ಬೇರೆ ಆಗಿದ್ದ ಎಲುವುಗಳು ಬರೇ ಸ್ನಾಯುಗಳಿಂದ ಬಂಧಿಸಲ್ಪಡುತ್ತವೆ, ಪರಸ್ಪರ ಕೀಲಿತವಾಗುವದಿಲ್ಲ, ಅದಕ್ಕೆ ಅಸಂಪ್ರಾಪ್ತಾಸೃಪಾಟಿಕಾ ಸಂಹನನ ಅನ್ನುವರು.

೨೯೮ ಪ್ರ.—ವರ್ಣನಾಮಕರ್ಮ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮದ ಉದಯದಿಂದ ಶರೀರದಲ್ಲಿ ಬಣ್ಣ ಉತ್ಪನ್ನವಾಗುವದೋ, ಅದಕ್ಕೆ ವರ್ಣನಾಮಕರ್ಮ ಅನ್ನುವರು.

೨೯೯ ಪ್ರ.—ಗಂಧನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಶರೀರಕ್ಕೆ ಸುಗಂಧ

ಪ್ರಾಪ್ತವಾಗುವದೋ, ಅದಕ್ಕೆ ಗಂಧನಾಮಕರ್ಮ ಅನ್ನುವರು.

೭೦೦ ಪ್ರ.—ರಸನಾಮಕರ್ಮ ಎಂದು ಯಾತಕ್ಕೆ ಅನ್ನುವರು?

ಉ.—ಯಾತರ ಉದಯದಿಂದ ಶರೀರದಲ್ಲಿ ರಸ ಉತ್ಪನ್ನವಾಗುವದೋ, ಅದಕ್ಕೆ ರಸನಾಮಕರ್ಮ ಅನ್ನುವರು.

೭೦೧ ಪ್ರ.—ಸ್ಪರ್ಶನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಶರೀರದೊಳಗೆ ಸ್ಪರ್ಶ ಉತ್ಪನ್ನವಾಗುವದೋ, ಅದಕ್ಕೆ ಸ್ಪರ್ಶನಾಮಕರ್ಮವೆನ್ನುವರು.

೭೦೨ ಪ್ರ.—ಆನುಪೂರ್ವಿನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಮರಣಾನಂತರ ಮತ್ತು ಜನ್ಮತಕ್ಕೊಳ್ಳುವದಕ್ಕಿಂತ ಮೊದಲು ಮಾರ್ಗದಲ್ಲಿ ಅಂದರೆ ವಿಗ್ರಹಗತಿಯಲ್ಲಿ, ಮರಣಕ್ಕಿಂತ ಮುಂಚೆ ಇದ್ದ ಶರೀರದ ಆಕಾರದ ಆತ್ಮದ ಪ್ರದೇಶಗಳು ಇರುತ್ತವೆಯೋ, ಅದಕ್ಕೆ ಆನುಪೂರ್ವಿನಾಮಕರ್ಮವೆನ್ನುವರು.

೭೦೩ ಪ್ರ.—ಅಗುರುಲಘುನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.— ಯಾವ ಕರ್ಮದ ಉದಯದಿಂದ ಕಬ್ಬಿಣದ ಗುಂಡಿನಂತೆ ಜಡ ಹಾಗು ಅರಳಿಯಂತೆ ಹಗುರ ಶರೀರವು ಆಗುವದಿಲ್ಲವೋ, ಅದಕ್ಕೆ ಅಗುರುಲಘುನಾಮಕರ್ಮವೆನ್ನುವರು.

೨೦೪ ಪ್ರ.—ಉಪಘಾತನಾಮಕರ್ಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮದ ಉದಯದಿಂದ ನಮ್ಮ ಶರೀರದಿಂದಲೇ ನಮ್ಮ ಘಾತವಾಗುವದೋ, ಅದಕ್ಕೆ ಉಪಘಾತನಾಮಕರ್ಮವೆನ್ನುವರು.

೨೦೫ ಪ್ರ.—ಪರಘಾತನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಎರಡನೆಯವರ ಘಾತವಾಗುವಂಥ ಅಂಗೋಪಾಂಗಗಳು ಪ್ರಾಪ್ತವಾಗುವವೋ, ಅದಕ್ಕೆ ಪರಘಾತನಾಮಕರ್ಮ ಅನ್ನುವರು.

೨೦೬ ಪ್ರ.—ಆತಪನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಸೂರ್ಯನಂತೆ ಉಷ್ಣವುಳ್ಳ ಶರೀರವು ಪ್ರಾಪ್ತವಾಗುವದೋ, ಅದಕ್ಕೆ ಆತಪನಾಮಕರ್ಮವೆನ್ನುವರು.

೨೦೭ ಪ್ರ.—ಉದ್ಯೋತನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವಕರ್ಮದ ಉದಯದಿಂದ ಪ್ರಕಾಶಮಾನವಾದ ಶರೀರವು ಪ್ರಾಪ್ತವಾಗುವದೋ, ಅದಕ್ಕೆ ಉದ್ಯೋತ ನಾಮಕರ್ಮವೆನ್ನುವರು.

೨೦೮ ಪ್ರ.—ವಿಹಾಯೋಗತಿನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಆಕಾಶದೊಳಗೆ ಗಮನಮಾಡಲಿಕ್ಕೆ ಬರುವದೋ, ಅದಕ್ಕೆ ವಿಹಾಯೋಗತಿನಾಮಕರ್ಮವೆನ್ನುವರು. ಇದರಲ್ಲಿ ೧ ಶುಭ ಮತ್ತು ೨ ಅಶುಭ ಹೀಗೆ ಎರಡು ಭೇದಗಳುಂಟು.

೨೦೯ ಪ್ರ.—ಉಚ್ಛ್ವಾಸನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವಕರ್ಮದ ಉದಯದಿಂದ ಶ್ವಾಸೋಚ್ಛ್ವಾಸವನ್ನು ಮಾಡಲಿಕ್ಕೆ ಬರುವದೋ, ಅದಕ್ಕೆ ಉಚ್ಛ್ವಾಸನಾಮಕರ್ಮವೆನ್ನುವರು.

೨೧೦ ಪ್ರ.—ತ್ರಸನಾಮಕರ್ಮವೆಂದರೇನು?

ಉ.—ಯಾವಕರ್ಮದ ಉದಯದಿಂದ ದ್ವೀಂದ್ರಿಯಾದಿ ಜೀವಗಳಲ್ಲಿ ಜನ್ಮವಾಗುವದೋ, ಅದಕ್ಕೆ ತ್ರಸನಾಮಕರ್ಮವೆನ್ನುವರು.

೩೧೧ ಪ್ರ.—ಸ್ಥಾವರನಾಮಕರ್ಮವೆಂದು ಯಾತಕ್ಕೆ ಅನ್ನುವರು?
ಉ.—ಯಾವ ಕರ್ಮದ ಉದಯದಿಂದ ಪೃಥ್ವಿ, ಅಪ್, ತೇಜ, ವಾಯು ಮತ್ತು ವನಸ್ಪತಿಗಳಲ್ಲಿ ಜನ್ಮವಾಗುವದೋ, ಅದಕ್ಕೆ ಸ್ಥಾವರನಾಮಕರ್ಮ ಅನ್ನುವರು.

೩೧೨ ಪ್ರ.—ಪರ್ಯಾಪ್ತಿಕರ್ಮವೆಂದು ಯಾತಕ್ಕೆ ಅನ್ನುವರು?
ಉ.—ಯಾವ ಕರ್ಮದ ಉದಯದಿಂದ ನಮ್ಮ ನಮ್ಮ ಯೋಗ್ಯ ಪರ್ಯಾಪ್ತಿಗಳು ಪೂರ್ಣವಾಗುವವೋ, ಅದಕ್ಕೆ ಪರ್ಯಾಪ್ತಿನಾಮಕರ್ಮವೆನ್ನುವರು.

೩೧೩ ಪ್ರ.—ಪರ್ಯಾಪ್ತಿ ಅಂದರೇನು?
ಉ.—ಆಹಾರವರ್ಗಣಾ, ಭಾಷಾವರ್ಗಣಾ, ಮತ್ತು ಮನೋವರ್ಗಣಾ ಇವುಗಳ ಪರಮಾಣುಗಳಿಗೆ, ಶರೀರೇಂದ್ರಿಯಾದಿ ಸ್ವರೂಪಗಳನ್ನು ಪರಿಣಮಿಸುವ ಶಕ್ತಿಯ ಪೂರ್ಣತೆಗೆ ಪರ್ಯಾಪ್ತಿ ಅನ್ನುವರು.

೩೧೪ ಪ್ರ.—ಪರ್ಯಾಪ್ತಿಯಲ್ಲಿ ಎಷ್ಟು ಭೇದಗಳುಂಟು?
ಉ.—ಆರು ಭೇದಗಳು. ಅವು:—೧ ಆಹಾರಪರ್ಯಾಪ್ತಿ, ೨ ಶರೀರಪರ್ಯಾಪ್ತಿ, ೩ ಇಂದ್ರಿಯಪರ್ಯಾಪ್ತಿ, ೪ ಶ್ವಾಸೋಚ್ಛ್ವಾಸಪರ್ಯಾಪ್ತಿ, ೫ ಭಾಷಾಪರ್ಯಾಪ್ತಿ, ೬ ಮನಃಪರ್ಯಾಪ್ತಿ.

ಟೀಪು:--ಏಕೇಂದ್ರಿಯ ಜೀವಕ್ಕೆ ಭಾಷೆ ಹಾಗು ಮನಸ್ಸಿನ ವಿಚಾರ ಇವೆರಡರ ಹೊರತು ಬೇರೆ ನಾಲ್ಕು ಪರ್ಯಾಪ್ತಿಗಳು ಆಗುತ್ತವೆ. ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಅಸೈನೀಪಂಚೇಂದ್ರಿಯ ಇವಕ್ಕೆ ಮನಸ್ಸಿನ ಹೊರತು ಉಳಿದ ಐದು ಪರ್ಯಾಪ್ತಿಗಳು ಆಗುತ್ತವೆ. ಸೈನೀಪಂಚೇಂದ್ರಿಯ ಜೀವಕ್ಕೆ ಆರೂ ಪರ್ಯಾಪ್ತಿಗಳು ಇರುತ್ತವೆ. ಈ ಯಾವತ್ತು ಪರ್ಯಾಪ್ತಿಗಳು ಪೂರ್ಣವಾಗುವ ಕಾಲವು ಅಂತರ್ಮುಹೂರ್ತದ್ದು ಇರುವದು; ಒಂದೊಂದು ಪರ್ಯಾಪ್ತಿಯ ಕಾಲವು ಅಂತರ್ಮುಹೂರ್ತದ್ದೇ ಇರುತ್ತದೆ, ಮತ್ತು ಎಲ್ಲವುಗಳ ಕಾಲವೆಲ್ಲ ಕೂಡಿಯೂ ಅಂತರ್ಮುಹೂರ್ತವೇ ಇರುವದು. ಮೊದಲಿನದಕ್ಕಿಂತ ಎರಡನೆಯದರ, ಎರಡನೆಯದಕ್ಕಿಂತ ಮೂರನೆಯದರ ಹೀಗೆ ಆರು ಪರ್ಯಾಪ್ತಿಗಳವರೆಗೆ ಕ್ರಮವಾಗಿ ದೊಡ್ಡ ದೊಡ್ಡ ಅಂತರ್ಮುಹೂರ್ತಗಳಿರುತ್ತವೆ. ಅವು ಅವುಗಳ ಯೋಗ್ಯ ಪರ್ಯಾಪ್ತಿಗಳು ಪ್ರಾಪ್ತವಾಗುವದಕ್ಕೆ ಆರಂಭವು ಒಮ್ಮೆಲೇ ಇರುವದು; ಆದರೆ ಪೂರ್ಣತೆಯು ಮಾತ್ರ ಕ್ರಮವಾಗಿ ಆಗುತ್ತದೆ. ಎಲ್ಲಿಯವರೆಗೆ ಯಾವದೊಂದು ಜೀವದ ಶರೀರಪರ್ಯಾಪ್ತಿಯು ಪೂರ್ಣವಾಗಿರುವದಿಲ್ಲ, ಆದರೆ ನಿಯಮಪೂರ್ವಕ ಅದು ಪೂರ್ಣವಾಗತಕ್ಕದ್ದಿರುತ್ತದೆ, ಅಲ್ಲಿಯವರೆಗೆ ಆ ಜೀವಕ್ಕೆ ನಿರ್ವೃತ್ಯಪರ್ಯಾಪ್ತಕ ಅನ್ನುತ್ತಾರೆ. ಯಾವದರ ಶರೀರ

ಪರ್ಯಾಪ್ತಿಯು **ಪೂರ್ಣ**ವಾಗಿರುವದೋ, ಅದಕ್ಕೆ ಪರ್ಯಾಪ್ತಕ ಅನ್ನುವರು. ಯಾತರ ಒಂದೂ ಪರ್ಯಾಪ್ತಿಯು **ಪೂರ್ಣ**ವಾಗಿರುವದಿಲ್ಲ, ಹಾಗು ಯಾವದು ಶ್ವಾಸೋಚ್ಛ್ವಸದ ಹದಿನೆಂಟನೆಯ ಭಾಗದಲ್ಲಿಯೇ ಮರಣಾವಸ್ಥೆಗೆ ಗುರಿಯಾಗತಕ್ಕದ್ದಿರುವದೋ, ಅದಕ್ಕೆ ಲಬ್ಧ್ಯಪರ್ಯಾಪ್ತಕ ಅನ್ನುವರು.

೩೧೫ ಪ್ರ.— ಅಪರ್ಯಾಪ್ತಿನಾಮಕರ್ಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮದ ಉದಯದಿಂದ ಲಬ್ಧ್ಯಪರ್ಯಾಪ್ತಕ ಅವಸ್ಥೆಯು ಪ್ರಾಪ್ತವಾಗುತ್ತದೆಯೋ, ಅದಕ್ಕೆ ಅಪರ್ಯಾಪ್ತಿನಾಮಕರ್ಮವೆನ್ನುವರು.

೩.೧೬ ಪ್ರ.—ಪ್ರತ್ಯೇಕನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಒಂದು ಶರೀರಕ್ಕೆ ಒಬ್ಬನೇ ಸ್ವಾಮಿಯಾಗಿರುತ್ತಾನೋ, ಅದಕ್ಕೆ ಪ್ರತ್ಯೇಕನಾಮಕರ್ಮ ಅನ್ನುವರು.

೩೧೭ ಪ್ರ.—ಸಾಧಾರಣನಾಮಕರ್ಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮದ ಉದಯದಿಂದ ಒಂದು ಶರೀರಕ್ಕೆ ಅನೇಕ ಜೀವಿಗಳು ಸ್ವಾಮಿಯಾಗುತ್ತವೆಯೋ, ಅದಕ್ಕೆ ಸಾಧಾರಣನಾಮಕರ್ಮವೆನ್ನುವರು.

೩೧೮ ಪ್ರ.—ಸ್ಥಿರನಾಮಕರ್ಮ ಮತ್ತು ಅಸ್ಥಿರನಾಮಕರ್ಮ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಶರೀರದೊಳಗಿನ ಧಾತು ಹಾಗು ಉಪಧಾತು ಇವು ತಮ್ಮ ತಮ್ಮ ಸ್ಥಳದಲ್ಲಿರುವವೋ, ಅದಕ್ಕೆ ಸ್ಥಿರನಾಮಕರ್ಮವೆಂತಲೂ, ಯಾತರ ಉದಯದಿಂದ ಧಾತು ಉಪಧಾತುಗಳು ತಮ್ಮ ತಮ್ಮ ಸ್ಥಳದಲ್ಲಿ ಸ್ಥಿರವಾಗಿ ಇರುವದಿಲ್ಲವೋ, ಅದಕ್ಕೆ ಅಸ್ಥಿರನಾಮಕರ್ಮವೆಂತಲೂ ಅನ್ನುವರು.

೩೧೯ ಪ್ರ.—ಶುಭನಾಮಕರ್ಮ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಶರೀರಾವಯವಗಳು ಸುಂದರವಾಗಿ ನಿರ್ಮಿಸಲ್ಪಡುವವೋ, ಅದಕ್ಕೆ ಶುಭನಾಮಕರ್ಮವೆನ್ನುವರು.

೩೨೦ ಪ್ರ.—ಅಶುಭನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವದರ ಉದಯದಿಂದ ಶರೀರದ ಅವಯುವಗಳು ಸುಂದರವಾಗಿ ನಿರ್ಮಿಸಲ್ಪಡುವದಿಲ್ಲವೋ, ಅದಕ್ಕೆ ಅಶುಭನಾಮಕರ್ಮ ಅನ್ನುವರು.

೩೨೧ ಪ್ರ.—ಸುಭಗನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಎರಡನೆಯ ಜೀವ

ಗಳು ನಮ್ಮ ಮೇಲೆ ಪ್ರೀತಿ ಮಾಡುವವೋ, ಅದಕ್ಕೆ ಸುಭಗನಾಮಕರ್ಮ ಅನ್ನುವರು.

೩೨೨ ಪ್ರ.—ದುರ್ಭಗನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಎರಡನೆಯ ಜೀವಗಳು ನಮ್ಮ ಮೇಲೆ ದ್ವೇಷ ಮಾಡುವವೋ, ಅದಕ್ಕೆ ದುರ್ಭಗನಾಮಕರ್ಮವೆನ್ನುವರು.

೩೨೩ ಪ್ರ—ಸುಸ್ವರನಾಮಕರ್ಮವೆಂದು ಯಾತಕ್ಕೆ ಅನ್ನುವರು ?

ಉ—ಯಾವ ಕರ್ಮದ ಉದಯದಿಂದ ಮಧುರವಾದ ಸ್ವರವು ಪ್ರಾಪ್ತವಾಗುವದೋ, ಅದಕ್ಕೆ ಸುಸ್ವರನಾಮಕರ್ಮವೆನ್ನುವರು.

೩೨೪ ಪ್ರ.—ದುಃಸ್ವರನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಕರ್ಕಶ ಅಥವಾ ಸರ್ವರಿಗೂ ಇಂಪಾಗದಂಥ ಸ್ವರವು ಪ್ರಾಪ್ತವಾಗುವದೋ, ಅದಕ್ಕೆ ದುಃಸ್ವರನಾಮಕರ್ಮವೆನ್ನುವರು.

೩೨೫ ಪ್ರ.—ಆದೇಯನಾಮಕರ್ಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮದ ಉದಯದಿಂದ ಶರೀರಕ್ಕೆ ಕಾಂತಿಯುಂಟಾಗುವದೋ, ಅದಕ್ಕೆ ಆದೇಯನಾಮಕರ್ಮವೆನ್ನುವರು.

೩೨೬ ಪ್ರ.—ಅನಾದೇಯನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದಿಂದ ಕಾಂತಿರಹಿತವಾದ ಶರೀರವುಂಟಾಗುವದೋ, ಅದಕ್ಕೆ ಅನಾದೇಯನಾಮಕರ್ಮವೆನ್ನುವರು.

೩೨೭ ಪ್ರ.—ಯಶಃಕೀರ್ತಿನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಸಂಸಾರದಲ್ಲಿ ಜೀವಿಗಳ ಸಿಫಾರಸ ಆಗುವದೋ, ಅದಕ್ಕೆ ಯಶಃಕೀರ್ತಿನಾಮಕರ್ಮವೆನ್ನುವರು.

೩೨೮ ಪ್ರ.— ಅಯಶಃಕೀರ್ತಿನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಉದಯದಿಂದ ಸಂಸಾರದಲ್ಲಿ ಜೀವಿಗಳ ತಾರೀಫನ್ನು ಯಾರೂ ಮಾಡುವದಿಲ್ಲ, ಅದಕ್ಕೆ ಅಯಶ:ಕೀರ್ತಿನಾಮಕರ್ಮ ಅನ್ನುವರು.

೩೨೯ ಪ್ರ.—ತೀರ್ಥಂಕರನಾಮಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಅರ್ಹಂತ ಪದವಿಗೆ ಕಾರಣೀಭೂತವಾಗುವಂಥ ಕರ್ಮಕ್ಕೆ ತೀರ್ಥಂಕರನಾಮಕರ್ಮವೆನ್ನುವರು.

೩೩೦ ಪ್ರ.—ಗೋತ್ರಕರ್ಮವೆಂದು ಯಾತಕ್ಕೆ ಅನ್ನುವರು ?

ಉ.—ಯಾವ ಕರ್ಮದ ಉದಯದಿಂದ, ವಂಶಪರಂಪರೆಯಿಂದ ನಡೆಯುತ್ತ ಬಂದ ಆಚರಣಸ್ವರೂಪಿ ಉಚ್ಚ ಅಥವಾ ನೀಚ ಗೋತ್ರದಲ್ಲಿ ಜನ್ಮವಾಗುವದೋ ಅದಕ್ಕೆ ಗೋತ್ರಕರ್ಮವೆನ್ನುವರು.

೩೩೧ ಪ್ರ.—ಗೊತ್ರಕರ್ಮದಲ್ಲಿ ಎಷ್ಟು ಭೇದಗಳುಂಟು ?

ಉ.—ಎರಡು. ೧ ಉಚ್ಚಗೋತ್ರ ಮತ್ತು ೨ ನೀಚಗೋತ್ರ

೩೩೨ ಪ್ರ.—ಉಚ್ಚಗೋತ್ರಕರ್ಮವೆಂದು ಯಾತಕ್ಕೆ ಅನ್ನುವರು ?

ಉ.—ಯಾವ ಕರ್ಮದ ಉದಯದಿಂದ ಉಚ್ಚಗೋತ್ರದಲ್ಲಿ ಜನ್ಮವಾಗುವದೋ, ಅದಕ್ಕೆ ಉಚ್ಚಗೋತ್ರಕರ್ಮವೆನ್ನುವರು.

೩೩೩ ಪ್ರ.—ನೀಚಗೋತ್ರಕರ್ಮವೆಂದು ಯಾತಕ್ಕೆ ಅನ್ನುವರು ?

ಉ.—ಯಾವ ಕರ್ಮದ ಉದಯದಿಂದ ನೀಚಗೋತ್ರದಲ್ಲಿ ಜನ್ಮವಾಗುವದೋ, ಅದಕ್ಕೆ ನೀಚಗೋತ್ರಕರ್ಮವೆನ್ನುವರು.

೩೩೪ ಪ್ರ.—ಅಂತರಾಯಕರ್ಮವೆಂದು ಯಾತಕ್ಕೆ ಅನ್ನುವರು ?

ಉ.—ಯಾವ ಕರ್ಮವು ದಾನಾದಿಕಾರ್ಯಗಳಲ್ಲಿ ವಿಘ್ನ ಮಾಡುವದೋ, ಅದಕ್ಕೆ ಅಂತರಾಯಕರ್ಮವೆನ್ನುವರು.

೨೨೫ ಪ್ರ.—ಅಂತರಾಯಕರ್ಮದಲ್ಲಿ ಎಷ್ಟು ಭೇದಗಳು?

ಉ.—ಐದು ಭೆದಗಳಿರುವವು. ಅವು:— ೧ ದಾನಾಂತರಾಯ, ೨ ಲಾಭಾಂತರಾಯ, ೩ ಭೋಗಾಂತರಾಯ, ೪ ಉಪಭೋಗಾಂತರಾಯ, ೫ ವೀರ್ಯಾಂತರಾಯ. ಈ ಪ್ರತಿಯೊಂದು ಕರ್ಮಕ್ಕೆ ತಮ್ಮ ತಮ್ಮ ಕಾರ್ಯದಲ್ಲಿ ವಿಘ್ನವನ್ನುಂಟು ಮಾಡುವ ಸ್ವಭಾವವಿರುವದು.

೨೨೬ ಪ್ರ.—ಪುಣ್ಯಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮವು ಜೀವಿಗಳಿಗೆ ಇಷ್ಟವಸ್ತುವನ್ನು ಪ್ರಾಪ್ತಮಾಡಿಕೊಡುವದೋ, ಅದಕ್ಕೆ ಪುಣ್ಯಕರ್ಮವೆನ್ನುವರು.

೨೨೭ ಪ್ರ.—ಪಾಪಕರ್ಮ ಅಂದರೇನು?

ಉ.—ಯಾವ ಕರ್ಮವು ಜೀವಿಗಳಿಗೆ ಅನಿಷ್ಟವಸ್ತುಗಳ ಪ್ರಾಪ್ತಿಯನ್ನು ಮಾಡಿಕೊಡುವದೋ, ಅದಕ್ಕೆ ಪಾಪಕರ್ಮವೆನ್ನುವರು.

೨೨೮ ಪ್ರ.—ಘಾತಿಯಾಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮವು ಜೀವಿಗಳ ಜ್ಞಾನಾದಿ ಅನುಜೀವಿಗುಣಗಳನ್ನು ಘಾತಮಾಡುವದೋ, ಅದಕ್ಕೆ ಘಾತಿಯಾಕರ್ಮವೆನ್ನುವರು.

೨೩೯ ಪ್ರ.—ಅಘಾತಿಯಾಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮವು ಜೀವಿಗಳ ಜ್ಞಾನಾದಿ ಅನುಜೀವಿಗುಣಗಳನ್ನು ಘಾತಮಾಡುವದಿಲ್ಲವೋ, ಅದಕ್ಕೆ ಅಘಾತಿಯಾಕರ್ಮವೆನ್ನುವರು.

೨೪೦ ಪ್ರ.—ಸರ್ವಘಾತಿಕರ್ಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರ್ಮವು ಜೀವಿಗಳ ಅನುಜೀವಿಗುಣಗಳನ್ನು ಸಂಪೂರ್ಣವಾಗಿ ನಾಶಮಾಡುವದೋ, ಅದಕ್ಕೆ ಸರ್ವಘಾತಿಕರ್ಮವೆನ್ನುವರು.

೨೪೧ ಪ್ರ.—ದೇಶಘಾತಿಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮವು ಜೀವಿಗಳ ಅನುಜೀವಿಗುಣಗಳನ್ನು ಅಂಶತಃ ಘಾತಮಾಡುವದೋ, ಅದಕ್ಕೆ ದೇಶಘಾತಿಕರ್ಮವೆನ್ನುವರು.

೨೪೨ ಪ್ರ.—ಜೀವವಿಪಾಕೀಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಫಲವು ಜೀವಕ್ಕೆ ಮಾತ್ರ ಆಗುವದೋ, ಅದಕ್ಕೆ ಜೀವವಿಪಾಕೀಕರ್ಮವೆನ್ನುವರು.

೨೪೩ ಪ್ರ.—ಪುದ್ಗಲವಿಪಾಕೀಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಫಲವು ಪುದ್ಗಲದ ಮೇಲೆ ( ಶರೀ

ರಕ್ಕೆ) ಆಗುವದೋ, ಅದಕ್ಕೆ ಪುದ್ಗಲವಿಪಾಕೀ ಕರ್ಮವೆನ್ನುವರು.

೩೪೪ ಪ್ರ.—ಭವವಿಪಾಕೀಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಫಲದಿಂದ ಜೀವಿಗಳು ಸಂಸಾರದಲ್ಲಿ ಸಿಕ್ಕಿಕೊಳ್ಳುವವೋ, ಅದಕ್ಕೆ ಭವವಿಪಾಕೀ ಕರ್ಮವೆನ್ನುವರು.

೩೪೫ ಪ್ರ.—ಕ್ಷೇತ್ರವಿಪಾಕೀಕರ್ಮವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮದ ಫಲದಿಂದ ವಿಗ್ರಹಗತಿಯಲ್ಲಿ ಜೀವದ ಆಕಾರವು ಮೊದಲಿನ ಶರೀರದಂತೆ ಹುಟ್ಟುತ್ತದೋ, ಅದಕ್ಕೆ ಕ್ಷೇತ್ರವಿಪಾಕೀಕರ್ಮವೆನ್ನುವರು.

೩೪೬ ಪ್ರ.—ವಿಗ್ರಹಗತಿ ಎಂದು ಯಾತಕ್ಕೆ ಅನ್ನುವರು?

ಉ.—ಒಂದು ಶರೀರವನ್ನು ಬಿಟ್ಟು, ಎರಡನೆಯ ಶರೀರವನ್ನು ಧರಿಸುವದಕ್ಕಾಗಿ, ಜೀವವು ಯಾವಾಗ ಗಮಿಸುವದೋ, ಆಗ ಅದಕ್ಕೆ ವಿಗ್ರಹಗತಿ ಅನ್ನುವರು.

೩೪೭ ಪ್ರ.—ಘಾತಿಯಾಕರ್ಮಗಳು ಎಷ್ಟು? ಮತ್ತು ಯಾವವು?

ಉ.—ಘಾತಿಯಾಕರ್ಮಗಳು ೪೭ ಇರುವವು. ಅವು:—ಜ್ಞಾನಾವರಣ ೫, ದರ್ಶನಾವರಣ ೯, ಮೋಹನೀಯ ೨೮, ಮತ್ತು ಅಂತರಾಯ ೫.

೩೪೮ ಪ್ರ.—ಅಘಾತಿಯಾಕರ್ಮಗಳು ಎಷ್ಟು ಮತ್ತು ಯಾವವು?

ಉ.—ಒಂದುನೂರಾ ಒಂದು ಅಘಾತಿಯಾಕರ್ಮಗಳುಂಟು. ಅವು:—ವೇದನೀಯ ೨, ಆಯು ೪, ನಾಮ ೯೩, ಮತ್ತು ಮಿತ್ರ ೨.

೩೪೯ ಪ್ರ.—ಸರ್ವಘಾತಿಯಾಕರ್ಮಗಳ ಪ್ರಕೃತಿ ಎಷ್ಟು ಮತ್ತು ಯಾವವು?

ಉ.—ಇಪ್ಪತ್ತೊಂದು ಇರುವವು. ಅವು:—ಜ್ಞಾನಾವರಣೀಯದು ೧, ( ಕೇವಲಜ್ಞಾನಾವರಣ ) ದರ್ಶನಾವರಣೀಯವು ೬, ( ಕೇವಲಜ್ಞಾನಾವರಣ ೧, ಮತ್ತು ನಿದ್ರಾ ೫. ) ಮೋಹನೀಯವು ೧೪, ( ಅನಂತಾನುಬಂಧಿ ೪, ಅಪ್ರತ್ಯಾಖ್ಯಾನಾವರಣ ೪, ಪ್ರತ್ಯಾಖ್ಯಾನಾವರಣ ೪, ಮಿಥ್ಯಾತ್ವ ೧, ಹಾಗು ಸಮ್ಯಗ್ ಮಿಥ್ಯಾತ್ವ ೧. )

೩೫೦ ಪ್ರ.—ದೇಶಘಾತಿಪ್ರಕೃತಿ ಎಷ್ಟು ಮತ್ತು ಯಾವವು?

ಉ.—ಇಪ್ಪತ್ತಾರು. ಅವು:—ಜ್ಞಾನಾವರಣೀಯವು ೪, ( ಮತಿಜ್ಞಾನಾವರಣ, ಶ್ರುತಜ್ಞಾನಾವರಣ, ಅವಧಿಜ್ಞಾನಾವರಣ. ಮನಃಪರ್ಯಾಯ ಜ್ಞಾನಾವರಣ. ) ದರ್ಶನಾವರಣೀಯವು ೩, ( ಚಕ್ಷುರ್ದರ್ಶನಾವರಣ,

ಅಚಕ್ಷುರ್ದರ್ಶನಾವರಣ, ಮತ್ತು ಅವಧಿದರ್ಶನಾವರಣ.) ಮೋಹನೀಯವು ೧೪, (ಸಂಜ್ವಲನ ೪, ನೋಕಷಾಯ ೯, ಸಮ್ಯಗ್ಮಿಥ್ಯಾತ್ವ ೧.) ಅಂತರಾಯದವು ೫.

೩೫೧ ಪ್ರ.—ಕ್ಷೇತ್ರವಿಪಾಕೀ ಕರ್ಮಪ್ರಕೃತಿಗಳೆಷ್ಟು ಮತ್ತು ಯಾವವು?

ಉ.—ನಾಲ್ಕು. ಅವು:—ನರಕಗತ್ಯಾನುಪೂರ್ವಿ, ತಿರ್ಯಗ್ಗತ್ಯಾನುಪೂರ್ವಿ, ಮನುಷ್ಯಗತ್ಯಾನುಪೂರ್ವಿ, ಮತ್ತು ದೇವಗತ್ಯಾನುಪೂರ್ವಿ.

೩೫೨ ಪ್ರ.—ಭವವಿಪಾಕೀ ಪ್ರಕೃತಿಗಳು ಎಷ್ಟು ಮತ್ತು ಯಾವವು?

ಉ.—ನಾಲ್ಕು. ಅವು:—ನರಕಾಯು, ತಿರ್ಯಂಚಾಯು, ಮನುಷ್ಯಾಯು ಮತ್ತು ದೇವಾಯು.

೩೫೩ ಪ್ರ.—ಜೀವವಿಪಾಕೀ ಪ್ರಕೃತಿಗಳು ಎಷ್ಟು ಮತ್ತು ಯಾವವು?

ಉ.—ಎಪ್ಪತ್ತೆಂಟು ಇರುವವು. ಅವು:—ಘಾತಿಯಾಕರ್ಮದವು ೪೭, ಗೋತ್ರಕರ್ಮದವು ೨, ಮತ್ತು ನಾಮಕರ್ಮದವು ೨೭. (ತೀರ್ಥಂಕರ ಪ್ರಕೃತಿ, ಉಚ್ಛ್ವಾಸ, ಬಾದರ, ಸೂಕ್ಷ್ಮ, ಪರ್ಯಾಪ್ತಿ, ಅಪರ್ಯಾಪ್ತಿ,

ಸುಸ್ವರ, ದು:ಸ್ವರ, ಆದೇಯ, ಅನಾದೇಯ, ಯಶ: ಕೀರ್ತಿ, ಅಯಶ:ಕೀರ್ತಿ, ತ್ರಸ, ಸ್ಥಾವರ, ಪ್ರಶಸ್ತ ವಿಹಾಯೋಗತಿ, ಅಪ್ರಶಸ್ತವಿಹಾಯೋಗತಿ, ಸುಭಗ, ದುರ್ಭಗ,ಗತಿ ೪ ಮತ್ತು ಜಾತಿ ೫.) ಒಟ್ಟು ೭೮.

೩೫೪ ಪ್ರ.—ಪುದ್ಗಲವಿಪಾಕೀ ಪ್ರಕೃತಿಗಳೆಷ್ಟು ಮತ್ತು ಯಾವವು?

ಉ.—ಅರವತ್ತೆರಡು. ( ಸರ್ವ ಪ್ರಕೃತಿ ೧೪೮, ಇದರೊಳಗಿಂದ ಕ್ಷೇತ್ರವಿಪಾಕೀ ೪, ಭವವಿಪಾಕೀ ೪, ಜೀವವಿಪಾಕೀ ೭೮ ಹೀಗೆ ಒಟ್ಟಿಗೆ ೮೬ ಪ್ರಕೃತಿಗಳು ಹೋಗಲಾಗಿ ಉಳಿಯುವ ೬೨ ಪ್ರಕೃತಿಗಳು ಪುದ್ಗಲವಿಪಾಕೀಯವು ).

೩೫೫ ಪ್ರ.—ಪಾಪಪ್ರಕೃತಿಗಳು ಎಷ್ಟು ಮತ್ತು ಯಾವವು ?

ಉ.—ಒಂದುನೂರು ಪಾಪಪ್ರಕೃತಿಗಳುಂಟು. ಅವು:— ಘಾತಿಯಕರ್ಮದವು ೪೭, ಅಸಾತಾವೇದನೀಯದ್ದು ೧, ನೀಚಗೋತ್ರದ್ದು ೧, ನರಕಾಯುವಿನದು ೧, ಮತ್ತು ನಾಮಕರ್ಮದವು ೫೦, [ ನರಕಗತಿ ೧, ನರಕಗತ್ಯಾನುಪೂರ್ವಿ ೧, ತಿರ್ಯಗ್ಗತಿ ೧, ತಿರ್ಯಗ್ಗತ್ಯಾನುಪೂರ್ವಿ ೧, ಜಾತಿಕರ್ಮದೊಳಗಿನವು ಮೊದಲಿನ ೪, ಸಂಸ್ಥಾನ ಕಡೆಯವು ೫, ಸಂಹನನ ಕಡೆಯವು ೫, ಸ್ಪರ್ಶಾದಿಕಗಳು ೨೦, ಉಪಘಾತ೧,

ಅಪ್ರಶಸ್ತವಿಹಾಯೋಗತಿ ೧, ಸ್ಥಾವರ ೧, ಸೂಕ್ಷ್ಮ ೧, ಅಪರ್ಯಾಪ್ತಿ ೧, ಅನಾದೇಯ ೧, ಅಯಶಃಕೀರ್ತಿ ೧, ಅಶುಭ ೧, ದುರ್ಭಗ ೧, ದುಃಸ್ವರ ೧, ಅಸ್ಥಿರ ೧, ಸಾಧಾರಣ ೧, ಒಟ್ಟಿಗೆ ೫೦.]

೩೫೬ ಪ್ರ.—ಪುಣ್ಯಪ್ರಕೃತಿಗಳು ಎಷ್ಟು ಮತ್ತು ಯಾವವು?

ಉ.--ಅರವತ್ತೆಂಟು ಇರುವವು. ಅವು:—ಕರ್ಮದ ಪ್ರಕೃತಿಗಳೆಲ್ಲ ಕೂಡಿ ೧೪೮ ಇರುವವು. ಅದರೊಳಗಿಂದ ಪಾಪದವು ೧೦೦ ಪ್ರಕೃತಿಗಳನ್ನು ಕಳೆಯಲಾಗಿ ಉಳಿಯುವ ೪೮ ಪ್ರಕೃತಿಗಳು, ಹಾಗು ನಾಮಕರ್ಮದ ಸ್ಪರ್ಶಾದಿ ೨೦ ಪ್ರಕೃತಿಗಳು (ಈ ಇಪ್ಪತ್ತು ಪಾಪ ಹಾಗು ಪುಣ್ಯ ಇವೆರಡರಲ್ಲಿ ಎಣಿಸಲ್ಪಡುತ್ತವೆ. ಯಾಕಂದರೆ ಇವು ಕೆಲವರಿಗೆ ಇಷ್ಟ, ಕೆಲವರಿಗೆ ಅನಿಷ್ಟವಾಗುತ್ತಿರುತ್ತವೆ.) ಅಂತು ಪುಣ್ಯಕರ್ಮದ ಪ್ರಕೃತಿಗಳು ೬೮ ಆಗುವವು.

೩೫೭ ಪ್ರ.—ಸ್ಥಿತಿಬಂಧವೆಂದು ಯಾತಕ್ಕೆ ಅನ್ನುವರು?

ಉ.—ಎಲ್ಲಿಯ ವರೆಗೆ ಕರ್ಮವು ಆತ್ಮದ ಸಂಗಡ ಉಳಿಯುತ್ತದೋ, ಆ ಮರ್ಯಾದೆಗೆ ಸ್ಥಿತಿಬಂಧವೆನ್ನುವರು.

೩೫೮ ಪ್ರ.—ಎಂಟೂ ಕರ್ಮಗಳ ಉತ್ಕೃಷ್ಟ ಸ್ಥಿತಿಗಳು ಎಷ್ಟಿರುವವು?

ಉ.—ಜ್ಞಾನಾವರಣ, ದರ್ಶನಾವರಣ, ವೇದನೀಯ, ಅಂತರಾಯ ಈ ನಾಲ್ಕು ಕರ್ಮಗಳ ಉತ್ಕೃಷ್ಟ ಸ್ಥಿತಿ (ಮರ್ಯಾದೆ) ೩೦ ಕೋಡಾಕೋಡಿಸಾಗರದ್ದು, ಮೋಹನೀಯಕರ್ಮದ್ದು ೭೦ ಕೋಡಾಕೋಡಿ ಸಾಗರದ್ದು, ನಾಮಕರ್ಮ ಮತ್ತು ಗೋತ್ರಕರ್ಮ ಇವುಗಳದು ಇಪ್ಪತ್ತು ಇಪ್ಪತ್ತು ಕೋಡಾಕೋಡಿ ಸಾಗರದ್ದು, ಮತ್ತು ಆಯುಕರ್ಮದ್ದು ೩೩ ಸಾಗರದ್ದು ಈ ಪ್ರಕಾರ ಉಂಟು.

೩೫೯ ಪ್ರ.—ಎಂಟೂ ಕರ್ಮಗಳ ಜಘನ್ಯ ಸ್ಥಿತಿ ಎಷ್ಟು?

ಉ.—ವೇದನೀಯದ್ದು ಹನ್ನೆರಡು ಮುಹೂರ್ತ, ನಾಮ ಮತ್ತು ಗೋತ್ರಕರ್ಮಗಳದವು ಎಂಟೆಂಟು ಮುಹೂರ್ತ, ಮತ್ತು ಉಳಿದ ಸರ್ವಕರ್ಮದವು ಅಂತರ್ಮುಹೂರ್ತ ಹೀಗೆ ಜಘನ್ಯಸ್ಥಿತಿ ಇರುವದು.

೩೬೦ ಪ್ರ.—ಕೋಡಾಕೋಡಿಸಾಗರ ಅಂದರೇನು?

ಉ.—ಒಂದು ಕೋಟಿಗೆ ಒಂದು ಕೋಟಿಯಿಂದ ಗುಣಿಸಿದರೆ, ಬರುವ ಗುಣಾಕಾರಕ್ಕೆ ಕೋಡಾಕೋಡಿ ಅನ್ನುವರು.

೩೬೧ ಪ.—ಸಾಗರ ಅಂದರೇನು?

ಉ.—ಹತ್ತು ಕೋಡಾಕೋಡಿ ಅದ್ಧಾಪಲ್ಯಗಳಿಂದ ಒಂದು ಸಾಗರವಾಗುವದು.

೨೬೧ ಪ್ರ.—ಅದ್ಧಾಪಲ್ಯ ಎಂದು ಯಾತಕ್ಕೆ ಅನ್ನುವರು?

ಉ.—ಎರಡು ಸಾವಿರ ಹರದಾರಿ ತಗ್ಗು, ಎರಡು ಸಾವಿರ ಹರದಾರಿ ಅಗಲ, ಇಂಥ ದುಂಡಗಿನ ತಗ್ಗನ್ನು, ಕತ್ತರಿಗೆ ಹರಿಯದಂಥ ಕುರಿ ಕೂದಲಿನಿಂದ ಚನ್ನಾಗಿ ತುಳಿದು ತುಂಬಬೇಕು. ಅದರಲ್ಲಿ ಹಿಡಿಸಿದಷ್ಟು ಕೂದಲುಗಳೊಳಗಿಂದ ನೂರು ನೂರು ವರ್ಷಕ್ಕೊಂದೊಂದರಂತೆ ತೆಗೆಯಬೇಕು. ಎಷ್ಟು ವರ್ಷಕ್ಕೆ ಅವೆಲ್ಲ ಕೂದಲುಗಳು ಇಲ್ಲದಂತೆ ಆಗುವವೋ, ಅಷ್ಟು ವರ್ಷಗಳ ಅವಧಿಗೆ ವ್ಯವಹಾರಪಲ್ಯ ಅನ್ನುವರು. ವ್ಯವಹಾರಪಲ್ಯದ ಅಸಂಖ್ಯಪಟ್ಟು ಮಾಡಿದರೆ, ಉದ್ಧಾರಪಲ್ಯವಾಗುವದು. ಈ ಉದ್ಧಾರಪಲ್ಯದ ಅಸಂಖ್ಯಪಟ್ಟಿಗಿಂತಲೂ ಹೆಚ್ಚು ಆದರೆ ಅದ್ಧಾಪಲ್ಯ ಆಗುವದು. ಹೀಗೆ ಅದ್ಧಾಪಲ್ಯದ ಪ್ರಮಾಣವಿರುವದು.

೨೬೨ ಪ್ರ.—ಮುಹೂರ್ತ ಅಂದರೇನು?

ಉ.—ನಾಲ್ವತ್ತೆಂಟು ಮಿನೀಟಿಗೆ ಒಂದು ಮುಹೂರ್ತ ಅನ್ನುವರು.

೩೬೪ ಪ್ರ.—ಅಂತರ್ಮುಹೂರ್ತ ಅಂದರೇನು?

ಉ.—ಅವಲಿಗಿಂತ ಹೆಚ್ಚು ಮತ್ತು ಮುಹೂರ್ತಕ್ಕಿಂತ ಕಡಿಮೆ ಇರುವ ಕಾಲಾವಧಿಗೆ ಅಂತರ್ಮುಹೂರ್ತ ಅನ್ನುವರು.

೩೬೫ ಪ್ರ.—ಅವಲಿ ಅಂದರೇನು?

ಉ.—ಒಂದು ಶ್ವಾಸದಲ್ಲಿ ಎಷ್ಟೋ ಅವಲಿಗಳು ಆಗುವವು,

೩೬೬ ಪ್ರ.—ಶ್ವಾಸೋಚ್ಛ್ವಾಸ ಎಂದು ಯಾತಕ್ಕೆ ಅನ್ನುವರು?

ಉ.—ನಿರೋಗಿ ಮನುಷ್ಯನ ನಾಡಿಯು ಒಂದು ಹಾರಿಕೆಗೆ ಶ್ವಾಸೋಚ್ಛ್ವಾಸ ಅನ್ನುವರು.

೩೬೭ ಪ್ರ.—ಒಂದು ಮುಹೂರ್ತದಲ್ಲಿ ಎಷ್ಟು ಶಾಸೋಚ್ಛ್ವಾಸ ಆಗುವವು?

ಉ.—ಒಂದು ಮುಹೂರ್ತದಲ್ಲಿ(೩೭೭೩) ಮೂರುಸಾವಿರ; ಏಳುನೂರಾ ಎಪ್ಪತ್ತು ಮೂರು ಶ್ವಾಸೋಚ್ಛ್ವಾಸಗಳು ಆಗುವವು.

೩೬೮ ಪ್ರ.—ಅನುಭಾಗಬಂಧ ಎಂದು ಯಾತಕ್ಕೆ ಅನ್ನುವರು?

ಉ.—ಫಲದಾಯಕ ಶಕ್ತಿಯ ಹೀನಾಧಿಕತೆಗೆ ಅನುಭಾಗ ಬಂಧ ಅನ್ನುವರು.

೩೬೯ ಪ್ರ.—ಪ್ರದೇಶಬಂಧ ಅಂದರೇನು?

ಉ.—ಬಂಧಿಸಲ್ಪಡುವಂಥ ಕರ್ಮಗಳ ಸಂಖ್ಯೆಯ ನಿರ್ಣಯವಾಗುವದೇ ಪ್ರದೇಶಬಂಧವೆನಿಸುವದು.

೩೭೦ ಪ್ರ.—ಉದಯ ಅಂದರೇನು?

ಉ.— ಮರ್ಯಾದೆಯು ಮುಗಿಯುವವರೆಗೆ ಕರ್ಮಫಲವನ್ನು ಭೋಗಿಸುವದಕ್ಕೆ ಉದಯುವೆನ್ನುವರು.

೩೭೧ ಪ್ರ.—ಉದೀರಣಾ ಅಂದರೇನು?

ಉ.—ಮರ್ಯಾದೆ ಮುಗಿಯುವದಕ್ಕಿಂತ ಮುಂಚಿತವಾಗಿಯೇ ಕರ್ಮಫಲವನ್ನು ಕೊಡಲಿಕ್ಕೆ ಸಿದ್ಧವಾಗುವದೇ ಉದೀರಣಾ ಎನಿಸುವದು.

೩೭೨ ಪ್ರ.—ಉಪಶಮ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ದ್ರವ್ಯ, ಕ್ಷೇತ್ರ, ಕಾಲ, ಭಾವ ಇವುಗಳ ನಿಮಿತ್ತದಿಂದ ಕರ್ಮಶಕ್ತಿಯ ಉದ್ಭವವು ಆಗದಿರುವದಕ್ಕೆ ಉಪಶಮ ಅನ್ನುವರು.

೩೭೩ ಪ್ರ.—ಉಪಶಮದಲ್ಲಿ ಭೇದಗಳೆಷ್ಟು?

ಉ.—ಎರಡು.— ೧ ಅಂತಃಕರಣರೂಪ ಉಪಶಮ, ೨ ಸದವಸ್ಥಾರೂಪ ಉಪಶಮ.

೩೭೪ ಪ್ರ.— ಅಂತಃಕರಣರೂಪ ಉಪಶಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಭವಿಷ್ಯಕಾಲದಲ್ಲಿ ಉದಯಕ್ಕೆ ಬರಲಿಕ್ಕೆ ಯೋಗ್ಯ

ವಾದ ಕರ್ಮಪರಮಾಣುಗಳನ್ನು ಹಿಂದೆ ಮುಂದೆ ಉದಯಕ್ಕೆ ಬರಲಿಕ್ಕೆ ಯೋಗ್ಯವಾಗುವಂತೆ ಮಾಡುವದಕ್ಕೆ ಅಂತಃಕರಣರೂಪ ಉಪಶಮ ಅನ್ನುವರು.

೩೭೫ ಪ್ರ.—ಸದವಸ್ಥಾರೂಪ ಉಪಶಮವೆಂದು ಯಾತಕ್ಕೆ ಅನ್ನುವರು?

ಉ.—ವರ್ತಮಾನಕಾಲದ ಪ್ರಸಂಗವನ್ನು ಬಿಟ್ಟು, ಭವಿಷ್ಯತ್ಕಾಲಕ್ಕೆ ಉದಯಕ್ಕೆ ಬರುವಂಥ ಕರ್ಮಗಳು ಸದವಸ್ಥೆಯಲ್ಲಿ ಇರುವದಕ್ಕೆ ಸದವಸ್ಥಾರೂಪ ಉಪಶಮ ಅನ್ನುವರು.

೩೭೬ ಪ್ರ.—ಕ್ಷಯ ಅಂದರೇನು?

ಉ.—ಕರ್ಮದ ಅತ್ಯಂತವಾದ ನಿವೃತ್ತಿಗೆ ( ಕರ್ಮದ ಪೂರ್ಣನಾಶಕ್ಕೆ ) ಕ್ಷಯ ಅನ್ನುವರು.

೩೭೭ ಪ್ರ.—ಕ್ಷಯೋಪಶಮವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ವರ್ತಮಾನ ನಿಷೇಕದಲ್ಲಿ ಸರ್ವಘಾತಿಯಾಸ್ಪರ್ಧಕಗಳ ಉದಯು, ಹಾಗು ಭವಿಷ್ಯಕಾಲದಲ್ಲಿ ಉದಯುಕ್ಕೆ ಬರುವ ನಿಷೇಕಗಳ ಸದವಸ್ಥಾರೂಪ ಉಪಶಮು, ಹೀಗೆ ಇರುವ ಕರ್ಮದ ಅವಸ್ಥೆಗೆ ಕ್ಷಯೋಪಶಮ ಅನ್ನುವರು.

೩೭೮ ಪ್ರ.—ನಿಷೇಕ ಅಂದರೇನು?

ಉ.—ಒಂದು ಸಮಯದಲ್ಲಿ ಕರ್ಮದ ಎಷ್ಟು ಪರಮಾಣು ಗಳು ಉದಯಕ್ಕೆ ಬರುವವೋ, ಆ ಸರ್ವ ಕರ್ಮ ಸಮೂಹಕ್ಕೆ ನಿಷೇಕ ಅನ್ನುವರು.

೩೭೯ ಪ್ರ.—ಸ್ಪರ್ಧಕ ಅಂದರೇನು?

ಉ.—ವರ್ಗಣಾಸಮೂಹಕ್ಕೆ ಸ್ಪರ್ಧಕ ಅನ್ನುವರು.

೩೮೦ ಪ್ರ.—ವರ್ಗಣಾ ಅಂದರೇನು?

ಉ.—ವರ್ಗದ ಸಮೂಹಕ್ಕೆ ವರ್ಗಣಾ ಅನ್ನುವರು.

೩೮೧ ಪ್ರ.—ವರ್ಗ ಅಂದರೇನು?

ಉ.—ಸಮಾನ ಅವಿಭಾಗಪ್ರತಿಚ್ಛೇದವನ್ನು ಧಾರಣಮಾ ಡುವ ಪ್ರತ್ಯೇಕ ಕರ್ಮಪರಮಾಣುವಿಗೆ ವರ್ಗ ಅನ್ನುವರು.

೩೮೨ ಪ್ರ.—ಅವಿಭಾಗಪ್ರತಿಚ್ಛೇದ ಎಂದು ಯಾತಕ್ಕೆ ಅನ್ನು ತ್ತಾರೆ?

ಉ.—ಶಕ್ತಿಯ ಅವಿಭಾಗಿಯಾದ ಅಂಶಕ್ಕೆ ಅವಿಭಾಗಪ್ರತಿ ಚ್ಛೇದ ಅನ್ನುವರು.

೩೮೩ ಪ್ರ.—ಈ ಪ್ರಕರಣದಲ್ಲಿ "ಶಕ್ತಿ" ಶಬ್ದದ ಮೇಲಿಂದ ಯಾವ ಶಕ್ತಿಯು ಇಷ್ಟ ಇರುವದು?

ಉ.—ಈ ಸ್ಥಳದಲ್ಲಿ ಶಕ್ತಿ ಶಬ್ದದ ಮೇಲಿಂದ ಕರ್ಮದ ಅ ನುಭಾಗರೂಪ ಶಕ್ತಿ ಅಂದರೆ ಫಲದಾಯಕಶಕ್ತಿ

ಇಷ್ಟವಿರುವದೆಂದು ತಿಳಿಯತಕ್ಕದ್ದು.

೩೮೪ ಪ್ರ.—ಉದಯಾಭಾವೀಕ್ಷಯ ಎಂದು ಯಾತಕ್ಕೆ ಅನ್ನುವರು?

ಉ.—ಫಲಕೊಡದೆ ಆತ್ಮದಿಂದ ಕರ್ಮದ ಸಂಬಂಧವು ಹರಿದು ಹೋಗುವದಕ್ಕೆ ಉದಯಾಭಾವೀಕ್ಷಯ ಅನ್ನುವರು.

೩೮೫ ಪ್ರ.—ಉತ್ಕರ್ಷಣ ಎಂದು ಯಾತಕ್ಕೆ ಅನ್ನುವರು?

ಉ.—ಕರ್ಮದ ಸ್ಥಿತಿಯು ಬೆಳೆಯುವದಕ್ಕೆ ಉತ್ಕರ್ಷಣ ಅನ್ನುವರು.

೩೮೬ ಪ್ರ.—ಅಪಕರ್ಷಣ ಅಂದರೇನು?

ಉ.—ಕರ್ಮದ ಸ್ಥಿತಿಯು ಕಡಿಮೆಯಾಗುವದಕ್ಕೆ ಅಪಕರ್ಷಣ ಅನ್ನುವರು.

೩೮೭ ಪ್ರ.—ಸಂಕ್ರಮಣ ಅಂದರೇನು?

ಉ.—ಯಾವದೊಂದು ಕರ್ಮದ ಒಂದು ಸಜಾತೀಯ ಭೇದವು, ಎರಡನೆಯ ಕರ್ಮದ ಭೇದಸ್ವರೂಪದ್ದಾಗಿ ಹೋಗುವದಕ್ಕೆ ಸಂಕ್ರಮಣ ಅನ್ನುವರು.

೩೮೮ ಪ್ರ.—ಸಮಯಪ್ರಬದ್ಧ ಎಂದು ಯಾತಕ್ಕೆ ಅನ್ನುವರು?

ಉ.—ಒಂದು ಸಮಯದಲ್ಲಿ ಎಷ್ಟು ಕರ್ಮಪರಮಾಣುಗಳು

ಬಂಧಿಸಲ್ಪಡುತ್ತವೆಯೋ, ಅವಕ್ಕೆಲ್ಲ ಸಮಯಪ್ರಬದ್ಧ ಅನ್ನುವರು.

೩೪೯ ಪ್ರ.—ಗುಣಹಾನಿ ಎಂದು ಯಾತಕ್ಕೆ ಅನ್ನುವರು?

ಉ.—ಗುಣಾಕಾರ ಸ್ವರೂಪದಿಂದ ಮೇಲಿಂದ ಮೇಲೆ ಕಡಿಕಡಿಮೆ ದ್ರವ್ಯವು ಯಾವದರಲ್ಲಿ ಉಳಿಯುವದೋ, ಅದಕ್ಕೆ ಗುಣಹಾನಿ ಅನ್ನುವರು. ಉದಾ:—ಒಂದಾನೊಂದು ಜೀವಿಯು ಒಂದು ಸಮಯದಲ್ಲಿ ೬೩೦೦ ಪರಮಾಣುಗಳ ಸಮೂಹರೂಪಿ ಸಮಯಪ್ರಬದ್ಧದ ಬಂಧ ಮಾಡಲ್ಪಟ್ಟಿರುವದು, ಮತ್ತು ಅದರ ೪೮ ಸಮಯಗಳ ಸ್ಥಿತಿ ಬಿತ್ತು, ಇದರಲ್ಲಿ ಗುಣಹಾನಿಯು ಸಮೂಹರೂಪಿಯು ನಾನಾಗುಣಹಾನಿಯು ಆರು ಪ್ರಕಾರದ್ದು ಆಗುವದು. ಅವುಗಳಲ್ಲಿ ಪ್ರಥಮ ಗುಣಹಾನಿಯು ಪರಮಾಣು ೩೨೦೦, ಎರಡನೆಯು ಗುಣಹಾನಿಯವು ೧೬೦೦, ಮೂರನೆಯ ಗುಣಹಾನಿಯವು ೮೦೦, ನಾಲ್ಕನೆಯ ಗುಣಹಾನಿಯವು ೪೦೦, ಐದನೆಯ ಗುಣಹಾನಿಯವು ೨೦೦, ಆರನೆಯ ಗುಣಹಾನಿಯವು ೧೦೦ ಹೀಗೆ ಪರಮಾಣುಗಳಿರುವವು. ಈ ಸ್ಥಳದಲ್ಲಿ ಉತ್ತರೋತ್ತರ ಗುಣಹಾನಿಯಲ್ಲಿ ಗುಣಕಾರಕ ರೂಪದಿಂದ ಕಡಿಮೆ ಕಡಿಮೆ ಪರಮಾಣು

( ದ್ರವ್ಯ ) ಇರುತ್ತವಾದ್ದರಿಂದ ಇದಕ್ಕೆ ಗುಣಹಾನಿ ಅನ್ನುತ್ತಾರೆ.

೩೯೦ ಪ್ರ.—ಗುಣಹಾನಿ ಆಯಾಮ ಅಂದರೇನು?

ಉ.—ಒಂದು ಗುಣಹಾನಿಯ ಸಮಯದ ಸಮೂಹಕ್ಕೆ ಗುಣಹಾನಿ ಆಯಾಮ ಅನ್ನುವರು. ಉದಾ:—ಮೇಲಿನ ದೃಷ್ಟಾಂತದಲ್ಲಿ ೪೮ ಸಮಯಗಳ ಸ್ಥಿತಿಯಲ್ಲಿ ಆರು ಪ್ರಕಾರದ ಗುಣಹಾನಿಗಳಾಗಿದ್ದವು, ಆದ್ದರಿಂದ ೪೮ ಕ್ಕೆ ೬ ರಿಂದ ಭಾಗಿಸಿದರೆ, ಪ್ರತಿಯೊಂದು ಗುಣಹಾನಿಯ ಪ್ರಮಾಣ ೮ ಆಯಿತು. ಇದೇ ಗುಣಹಾನಿ ಆಯಾಮವೆನಿಸುವದು.

೩೯೧ ಪ್ರ.—ನಾನಾಗುಣಹಾನಿ ಎಂದು ಯಾತಕ್ಕೆ ಅನ್ನುವರು?

ಉ.—ಗುಣಹಾನಿಗಳ ಸಮೂಹಕ್ಕೆ ನಾನಾಗುಣಹಾನಿ ಅನ್ನುವರು. ಉದಾ:—ಮೇಲಿನ ದೃಷ್ಟಾಂತದಲ್ಲಿ ಎಂಟೆಂಟು ಸಮಯಗಳ ಆರು ಗುಣಹಾನಿಗಳಾಗುತ್ತವೆಂದು ಹೇಳಿರುವದು. ಅದರಲ್ಲಿಯ ಆರು ಈ ಸಂಖ್ಯೆಯು ನಾನಾಗುಣಹಾನಿಯ ಪ್ರಮಾಣವಾಗಿರುವದು.

೩೯೨ ಪ್ರ.—ಅನ್ಯೋನ್ಯಾಭ್ಯಸ್ತರಾಶಿ ಎಂದು ಯಾತಕ್ಕೆ ಅನ್ನುವರು?

ಉ.—ನಾನಾಗುಣಹಾನಿಯ ಪ್ರಮಾಣದಷ್ಟು ಸಾರೆ ಎರಡು ಈ ಸಂಖ್ಯೆಯನ್ನು ಇಟ್ಟು, ಅವುಗಳ ಪರಸ್ಪರ ಗುಣಾಕಾರವನ್ನು ಮಾಡುವದರಿಂದ ಯಾವ ಗುಣಾಕಾರ ಬರುವದೋ, ಅದಕ್ಕೆ ಅನ್ಯೋನ್ಯಾಭ್ಯಸ್ತರಾಶಿ ಅನ್ನುವರು. ಉದಾ:— ಮೇಲಿನ ದೃಷ್ಟಾಂತದಲ್ಲಿ 'ಆರು' ಈ ಪ್ರಮಾಣದಷ್ಟು ಸಾರೆ 'ಎರಡು' ಈ ಸಂಖ್ಯೆಯನ್ನು ಇಟ್ಟು ಗುಣಾಕಾರ ಮಾಡಿದರೆ ೬೪ ಬರುವದು. ( ೨×೨×೨×೨×೨×೨=೬೪ ) ಇದೇ ಅನ್ಯೋನ್ಯಾಭ್ಯಸ್ತರಾಶಿಯ ಪ್ರಮಾಣವು.

೩೯೩ ಪ್ರ.—ಅಂತಿಮ ಗುಣಹಾನಿಯ ಪ್ರಮಾಣವನ್ನು ಹ್ಯಾಗೆ ತೆಗೆಯಬೇಕ?

ಉ.— ಅನ್ಯೋನ್ಯಾಭ್ಯಸ್ತರಾಶಿಯ ಪ್ರಮಾಣದೊಳಗಿಂದ ಒಂದನ್ನು ಕಡಿಮೆ ಮಾಡಿ, ಉಳಿದದ್ದರಿಂದ ಸಮಯ ಪ್ರಬದ್ಧದ ಪ್ರಮಾಣಕ್ಕೆ ಭಾಗಿಸಲು, ಅಂತಿಮಗುಣ ಹಾನಿಯ ದ್ರವ್ಯಧ ಪ್ರಮಾಣ ಹೊರಡುತ್ತದೆ. ಉದಾ:— ಸಮಯಪ್ರಬದ್ಧದ ಪ್ರಮಾಣ ೬೩೦೦. ಒಂದು ಕಡಿಮೆಯುಳ್ಳ ಅನ್ಯೋನ್ಯಭ್ಯಸ್ತಪ್ರಮಾಣ ಅಂದರೆ ೬೩. ಇದರಿಂದ ಭಾಗಿಸಲು ೧೦೦ ಬಂತು. ಇದೇ ಅಂತಿಮಗುಣಹಾನಿಯ ದ್ರವ್ಯವೆನಿಸುವದು.

 

೩೯೪ ಪ್ರ.—ಇತರ ಗುಣಹಾನಿದ್ರವ್ಯದ ಪ್ರಮಾಣವನ್ನು ಹ್ಯಾಗೆ ತೆಗೆಯಬೇಕು?

ಉ.—ಅಂತಿಮಗುಣಹಾನಿಯ ದ್ರವ್ಯವನ್ನು ಪ್ರಮಾಣವನ್ನು ಮೊದಲನೆಯ ಗುಣಹಾನಿಯ ವರೆಗೆ ದುಪ್ಪಟ್ಟು ಮಾಡುತ್ತ ಹೋಗುವದರಿಂದ ಇತರಗುಣಹಾನಿ ದ್ರವ್ಯದ ಪ್ರಮಾಣ ಹೊರಡುತ್ತದೆ. ಉದಾ:— ೨೦೦–೪೦೦–೮೦೦–೧೬೦೦–೩೨೦೦.

೩೯೫ ಪ್ರ.—ಪ್ರಥಮ ದ್ವಿತೀಯಾದಿ ಸಮಯಗಳಲ್ಲಿ ಪ್ರತ್ಯೇಕ ಗುಣಹಾನಿಯೊಳಗಿನ ದ್ರವ್ಯದ ಪ್ರಮಾಣವು ಹ್ಯಾಗಿರುತ್ತದೆ?

ಉ.— ನಿಷೇಕಹಾರಕ್ಕೆ ಚಯದಿಂದ ಗುಣಿಸಿದರೆ, ಪ್ರತಿಯೊಂದು ಗುಣಹಾನಿಯ ಪ್ರಥಮಸಮಯದ ದ್ರವ್ಯ ಹೊರಡುತ್ತದೆ; ಮತ್ತು ಪ್ರಥಮಸಮಯದ ದ್ರವ್ಯದೊಳಗಿಂದ ಒಂದೊಂದು ಚಯುವನ್ನು ವಜಾ ಮಾಡುತ್ತ ಹೋಗುವದರಿಂದ ಉತ್ತರೋತ್ತರ ಸಮಯದೊಳಗಿನ ದ್ರವ್ಯಗಳ ಪ್ರಮಾಣವು ಹೊರಡುತ್ತದೆ. ಉದಾ:—ನಿಷೇಕಹಾರ ೧೬, ಇದಕ್ಕೆ ಚಯ ೩೨, ಇದರಿಂದ ಗುಣಿಸಲು, ಪ್ರಥಮ ಸಮಯದೊಳಗಿನ ದ್ರವ್ಯ ೫೧೨ ಬರುತ್ತದೆ. ಈ ೫೧೨ ರೊಳಗಿಂದ

ಒಂದೊಂದು ಚಯವನ್ನು ಅರ್ಥಾತ್ ೩೨ ರಂತೆ ವಜಾ ಕಳಿಯಲು ಎರಡನೆಯ ಸಮಯದೊಳಗಿನ ದ್ರವ್ಯ ಪ್ರಮಾಣ ೪೮೦, ಮೂರನೆಯದರ ಪ್ರಮಾಣ ೪೪೮, ನಾಲ್ಕನೆಯದರ ಪ್ರಮಾಣ ೪೧೬, ಐದನೆಯದರ ಪ್ರಮಾಣ ೩೮೪, ಆರನೆಯದರ ಪ್ರಮಾಣ ೩೫೨, ಏಳನೆಯದರ ಪ್ರಮಾಣ ೩೨೦ ಮತ್ತು ಎಂಟನೆಯದರ ಪ್ರಮಾಣ ೨೮೮. ಈ ಪ್ರಕಾರ ಹೊರಡುತ್ತದೆ. ಇದರಂತೆಯೇ ಎರಡನೇ, ಮೂರನೇ ಮೊದಲಾದ ಗುಣಹಾನಿಯೊಳಗಿನ ಪ್ರಥಮ ದ್ವಿತೀಯಾದಿ ಸಮಯಗಳ ಪ್ರಮಾಣವನ್ನು ತೆಗೆಯಬೇಕು.

೩೯೬ ಪ್ರ.—ನಿಷೇಕಹಾರ ಅಂದರೇನು?

ಉ.—ಗುಣಹಾನಿಆಯಾಮದ ಇಮ್ಮಡಿ ಪ್ರಮಾಣಕ್ಕೆ ನಿಷೇಕಹಾರ ಅನ್ನುವರು.

೩೯೭ ಪ್ರ.—ಚಯ ಅಂದರೇನು?

ಉ.– ಶ್ರೇಣಿವ್ಯವಹಾರ ಗಣಿತದಲ್ಲಿ ಸಮಾನ ಹಾನಿ ಅಥವಾ ಸಮಾನ ವೃದ್ಧಿಯ ಯಾವ ಪ್ರಮಾಣ ಇರುವದೋ, ಅದಕ್ಕೆ ಚಯ ಅನ್ನುವರು.

೩೯೮ ಪ್ರ.—ಈ ಪ್ರಕರಣದಲ್ಲಿ ಚಯದ ಪ್ರಮಾಣವನ್ನು ಯಾವ ರೀತಿಯಿಂದ ತೆಗೆಯಬೇಕು?

೬.—ನಿಷೇಕಹಾರದೊಳಗೆ ಒಂದರಿಂದ ಹೆಚ್ಚಾದ ಗುಣಹಾನಿಯ ಪ್ರಮಾಣವನ್ನು ಕೂಡಿಸಿ, ಅದರ ಅರ್ಧ ಮಾಡಿ ಬಂದದ್ದಕ್ಕೆ ಗುಣಹಾನಿಆಯಾಮದಿಂದ ಗುಣಿಸಬೇಕು. ಈ ಪ್ರಕಾರ ಗುಣಿಸುವದರಿಂದ ಬಂದ ಗುಣಾಕಾರದಿಂದ ವಿವಕ್ಷಿತಗುಣಹಾನಿದ್ರವ್ಯಕ್ಕೆ ಭಾಗಿಸಲು ಚಯದ ಪ್ರಮಾಣ ಹೊರಡುತ್ತದೆ. ಉದಾ:– ನಿಷೇಕಹಾರ ೧೬, ಇದರಲ್ಲಿ ಒಂದರಿಂದ ಹೆಚ್ಚಾದ ಗುಣಹಾನಿಆಯಾಮ ೯ ಕೂಡಿಸಲು ೨೫ ಆಯಿತು. ಇದರ ಅರ್ಧ ಮಾಡಲು ೧೨॥ ಆಯಿತು. ಇದಕ್ಕೆ ಗುಣಹಾನಿಆಯಾಮ ೮ ರಿಂದ ಗುಣಿಸಲು ೧೦೦ ಬರುವದು. ಇದರಿಂದ ವಿವಕ್ಷಿತ ಪ್ರಥಮಗುಣಹಾನಿಯ ದ್ರವ್ಯಕ್ಕೆ ಅಂದರೆ ೩೨೦೦ ಕ್ಕೆ ಭಾಗಿಸಲು ಪ್ರಥಮಗುಣಹಾನಿಸಂಬಂಧವಾದ ಚಯದ ಪ್ರಮಾಣವಾದ ೩೨ ಬಂತು. ಇದರಂತೆ ದ್ವಿತೀಯ ಗುಣಹಾನಿಯ ಚಯದ ಪ್ರಮಾಣ ೧೯, ತೃತೀಯ ಗುಣಹಾನಿಯದು ೮, ಚತುರ್ಥ ಗುಣಹಾನಿಯದು ೪, ಪಂಚಮ ಗುಣಹಾನಿಯದು ೨ ಮತ್ತು ಅಂತಿಮ ಗುಣಹಾನಿಯದು ೧. ಹೀಗೆ ಪ್ರಮಾಣಗಳು ಹೊರಡುವವು.

೩೯೯ ಪ್ರ.—ಅನುಭಾಗರಚನೆಯ ಕ್ರಮವು ಹ್ಯಾಗಿರುವದು ?

ಉ.— ದ್ರವ್ಯದ ಅಪೇಕ್ಷೆಯಿಂದ ಮೇಲಿನ ಪ್ರಶ್ನೋತ್ತರಗಳಲ್ಲಿ ಯಾವ ರಚನೆಯು ತೋರಿಸಲ್ಪಟ್ಟಿರುವದೋ, ಅದರೊಳಗಿನ ಪ್ರತಿಯೊಂದು ಗುಣಹಾನಿಯ ಪ್ರಥಮಾದಿ ಸಮಯ ಸಂಬಂಧವಾದ ದ್ರವ್ಯಕ್ಕೆ ವರ್ಗಣಾ ಅನ್ನುವರು. ಆ ವರ್ಗಣದಲ್ಲಿ ಇರುವ ಪರಮಾಣುಗಳಿಗೆ ವರ್ಗ ಅನ್ನುವರು. ಪ್ರಥಮ ಗುಣಹಾನಿಯ ಮೊದಲನೆಯ ವರ್ಗಣದಲ್ಲಿರುವ ೫೧೨ ವರ್ಗಗಳಲ್ಲಿ ಅನುಭಾಗಶಕ್ತಿಯ ಅವಿಭಾಗಪ್ರತಿಚ್ಛೇದಗಳು ಸರಿಯಾದವಿರುವವು; ಮತ್ತು ಆ ಅವಿಭಾಗ ಪ್ರತಿಚ್ಛೇದಗಳು ದ್ವಿತೀಯಾದ ವರ್ಗಣಗಳ ವರ್ಗಗಳ ಅವಿಭಾಗಪ್ರತಿಚ್ಛೇದಗಳ ಅಪೇಕ್ಷೆಯಿಂದ ನ್ಯೂನ ಅರ್ಥಾತ್ ಜಘನ್ಯ ಇರುವವು. ದ್ವಿತೀಯಾದ ವರ್ಗಣಗಳ ವರ್ಗಗಳಲ್ಲಿ ಒಂದೊಂದು ಅವಿಭಾಗಪ್ರತಿಚ್ಛೇದದ ಅಧಿಕತ್ವದ ಕರ್ಮದಿಂದ ಯಾವ ವರ್ಗಣದವರೆಗೆ ಒಂದೊಂದು ಅವಿಭಾಗಪ್ರತಿಚ್ಛೇದವು ಬೆಳೆಯುವದೋ, ಆ ವರ್ಗಣದವರೆಗೆ ವರ್ಗಣಗಳ ಸಮೂಹಕ್ಕೆ ಒಂದು ಸ್ಪರ್ಧಕ ಎಂಬ ಹೆಸರು ಇರು

ವದು. ಮತ್ತು ಯಾವ ವರ್ಗಣಗಳ ವರ್ಗದಲ್ಲಿ ಯುಗಪತ್ ಅನೇಕ ಅವಿಭಾಗಪ್ರತಿಚ್ಛೇದಗಳ ವೃದ್ಧಿಯಾಗಿ, ಪ್ರಥಮ ವರ್ಗಣಗಳ ವರ್ಗದ ಅವಿಭಾಗಪ್ರತಿಚ್ಛೇದದ ಸಂಖ್ಯೆಯು ಇಮ್ಮಡಿಯಾಗುವದು. ಅಲ್ಲಿಂದ ಎರಡನೆಯ ಸ್ಪರ್ಧಕಕ್ಕೆ ಆರಂಭವಾಗುತ್ತದೆಂದು ತಿಳಿಯಬೇಕು. ಇದರಂತೆ ಯಾವ ಯಾವ ವರ್ಗಣಗಳ ವರ್ಗದಲ್ಲಿ ಅವಿಭಾಗಪ್ರತಿಚ್ಛೇದಗಳ ಸಂಖ್ಯೆಯ ತಿಪ್ಪಟ್ಟು, ಚೌಪಟ್ಟು ಮೊದಲಾದ ಅವಿಭಾಗಪ್ರತಿಚ್ಛೇದಗಳು ಆಗುವವೋ, ಅಲ್ಲಿಂದ ಮೂರನೆಯ, ನಾಲ್ಕನೆಯ ಮೊದಲಾದ ಸ್ಪರ್ಧಕಗಳಿಗೆ ಆರಂಭವಾಗುತ್ತದೆಂದು ತಿಳಿಯಬೇಕು. ಈ ಪ್ರಕಾರ ಒಂದು ಗುಣಹಾನಿಯಲ್ಲಿ ಅನೇಕ ಸ್ಪರ್ಧಕಗಳು ಇರುತ್ತವೆ.

೪೦೦ ಪ್ರ.—ಆಸ್ರವ ಅಂದರೇನು ?

ಉ.—ಬಂಧಕ್ಕೆ ಕಾರಣವಾದದ್ದೇ ಆಸ್ರವವು.

೪೦೧ ಪ್ರ.—ಆಸ್ರವದಲ್ಲಿ ಎಷ್ಟು ಭೇದಗಳುಂಟು ?

ಉ.—ನಾಲ್ಕು. ಅವು:—೧ ದ್ರವ್ಯಬಂಧದ ನಿಮಿತ್ತಕಾರಣ, ೨ ದ್ರವ್ಯಬಂಧದ ಉಪಾದಾನಕಾರಣ, ೩ ಭಾವ

ಬಂಧದ ನಿಮಿತ್ತಕಾರಣ, ೪ ಭಾವಬಂಧದ ಉಪಾದಾನಕಾರಣ.

೪೦೨ ಪ್ರ.--ಕಾರಣ ಅಂದರೇನು?

ಉ.—ಕಾರ್ಯವನ್ನುಂಟು ಮಾಡಲಿಕ್ಕೆ ಯೋಗ್ಯವಾದ ಸಾಧನಗಳ ಸಮೂಹಕ್ಕೆ ಕಾರಣ ಅನ್ನುವರು.

೪೦೩ ಪ್ರ.—ಕಾರಣದಲ್ಲಿ ಭೇದಗಳೆಷ್ಟು?

ಉ.—ಎರಡು. ಅವು:—೧ ಸಮರ್ಥಕಾರಣ, ೨ ಅಸಮರ್ಥಕಾರಣ.

೪೦೪ ಪ್ರ.—ಸಮರ್ಥಕಾರಣ ಅಂದರೇನು?

ಉ.—ಪ್ರತಿಬಂಧ ಮಾಡುವವರು ಇಲ್ಲದಿರುವಾಗ ಸಹಾಯಭೂತವಾದ ಸಂಪೂರ್ಣ ಸಾಹಿತ್ಯಗಳ ಸದ್ಭಾವವಾಗಿರುವದಕ್ಕೆ ಸಮರ್ಥಕಾರಣವೆನ್ನುವರು. ಇದರಿಂದ ಕಾರ್ಯವು ನಿಯಮಿತವಾಗಿ ಕೈಗೂಡಿ ಬರುತ್ತದೆ.

೪೦೫ ಪ್ರ.—ಅಸಮರ್ಥಕಾರಣ ಅಂದರೇನು?

ಉ.—ಬೇರೆ ಬೇರೆಯಾಗಿರುವ ಪ್ರತಿಯೊಂದು ಸಾಮುಗ್ರಿಗೆ ಅಸಮರ್ಥಕಾರಣ ಅನ್ನುವರು. ಇದರಿಂದ ನಿಶ್ಚಯವಾಗಿ ಕಾರ್ಯ ಆದೀತೆಂಬ ನಿಯಮವಿಲ್ಲ.

೪೦೬ ಪ್ರ.—ಸಹಕಾರಿ ಸಾಮುಗ್ರಿಯ ಪ್ರಕಾರಗಳೆಷ್ಟು?

ಉ.—ಎರಡು. ಅವು:—೧ ನಿಮಿತ್ತಕಾರಣ, ೨ ಉಪಾದಾನಕಾರಣ.

೪೦೭ ಪ್ರ.—ನಿಮಿತ್ತಕಾರಣ ಅಂದರೇನು?

ಉ.—ಯಾವ ಪದಾರ್ಥವು ಸ್ವತಃ ಕಾರ್ಯರೂಪ ಆಗುವದಿಲ್ಲ, ಆದರೆ ಕಾರ್ಯದ ಉತ್ಪತ್ತಿಗೆ ಸಹಾಯಕವಾಗುತ್ತದೆ, ಅದಕ್ಕೆ ನಿಮಿತ್ತಕಾರಣ ಅನ್ನುತ್ತಾರೆ. ಉದಾ:—ಕೊಡದ ಉತ್ಪತ್ತಿಗೆ—ಕುಂಬಾರ, ತಿಗರಿ ಮುಂತಾದವು.

೪೦೮ ಪ್ರ.—ಉಪಾದಾನಕಾರಣ ಎಂದು ಯಾತಕ್ಕೆ ಅನ್ನುವರು.

ಉ. –ಯಾವ ಪದಾರ್ಥವು ಸ್ವತಃ ಕಾರ್ಯರೂಪವಾಗುವದೋ, ಅದಕ್ಕೆ ಉಪಾದಾನಕಾರಣ ಅನ್ನುವರು. ಉದಾ:—ಕೊಡದ ಉತ್ಪತ್ತಿಗೆ ಮಣ್ಣು. ಅನಾದಿಕಾಲದಿಂದ ದ್ರವ್ಯಗಳಲ್ಲಿ ನಡೆಯುತ್ತ ಬಂದ ಪರ್ಯಾಯದ ಪ್ರವಾಹದಲ್ಲಿ ಅನಂತರ ಪೂರ್ವಕ್ಷಣವರ್ತೀ ಪರ್ಯಾಯವೇ ಉಪಾದಾನಕಾರಣವಾಗಿರುವದು, ಮತ್ತು ಅನಂತರ ಉತ್ತರಕ್ಷಣವರ್ತೀ ಪರ್ಯಾಯವು ಕಾರ್ಯವಾಗಿರುವದು.

೪೦೯ ಪ್ರ.—ದ್ರವ್ಯಬಂಧ ಅಂದರೇನು?

ಉ.—ಕಾರ್ಮಾಣಸ್ಕಂಧರೂಪ ಪುದ್ಗಲ ದ್ರವ್ಯದೊಳಗಿನ

ಆತ್ಮದೊಡನೆ ಸಂಬಂಧವಾಗುವ ಶಕ್ತಿಗೆ ದ್ರವ್ಯಬಂಧ ಅನ್ನುವರು.

೪೧೦ ಪ್ರ.—ಭಾವಬಂಧ ಅಂದರೇನು?

ಉ.—ಆತ್ಮದ ಯೋಗಕಷಾಯರೂಪ ಪರಿಣಾಮಕ್ಕೆ ಭಾವಬಂಧ ಅನ್ನುವರು.

೪೧೧ ಪ್ರ.—ದ್ರವ್ಯಬಂಧದ ನಿಮಿತ್ತಕಾರಣ ಏನಿರುವದು?

ಉ.—ಆತ್ಮದ ಯೋಗಕಷಾಯರೂಪ ಪರಿಣಾಮದ್ರವ್ಯ ಬಂಧದ ನಿಮಿತ್ತಕಾರಣವಾಗಿರುವದು.

೪೧೨ ಪ್ರ.—ದ್ರವ್ಯಬಂಧದ ಉಪಾದಾನಕಾರಣ ಏನಿರುವದು?

ಉ.—ಬಂಧ ಆಗುವ ಪೂರ್ವಕ್ಷಣದಲ್ಲಿ, ಬಂಧವಾಗುವ ಸನ್ಮುಖವಾದ ಕಾರ್ಮಣಸ್ಕಂಧವು ದ್ರವ್ಯಬಂಧದ ಉಪಾದಾನಕಾರಣವಾಗಿರುವದು.

೪೧೩ ಪ್ರ.—ಭಾವಬಂಧದ ನಿಮಿತ್ತಕಾರಣ ಯಾವದು?

ಉ.—ಉದಯು ಮತ್ತು ಉದೀರಣೆಯು ಅವಸ್ಥೆಯನ್ನು ಪಡೆದಂಥ ಪೂರ್ವಬದ್ಧಕರ್ಮವು ಭಾವಬಂಧದ ನಿಮಿತ್ತ ಕಾರಣವಾಗಿರುವದು.

೪೧೪ ಪ್ರ.—ಭಾವಬಂಧದ ಉಪಾದಾನಕಾರಣ ಯಾವದು?

ಉ.—ಭಾವಬಂಧದ ನಿವಿಕ್ಷಿತ ಸಮಯದ ಅನಂತರ ಪೂರ್ವಕ್ಷಣವರ್ತಿಯು ಯೋಗಕಷಾಯ ರೂಪ

ಆತ್ಮದ ಪರ್ಯಾಯ ವಿಶೇಷ ಭಾವಬಂಧದ ಉಪಾ
ದಾನ ಕಾರಣವಾಗಿರುವದು.

೪೧೫ ಪ್ರ.—ಭಾವಾಸ್ರವ ಅಂದರೇನು ?

ಉ.—ದ್ರವ್ಯಬಂಧದ ನಿಮಿತ್ತಕಾರಣಕ್ಕೆ ಅಥವಾ ಭಾವ
ಬಂಧದ ಉಪಾದಾನ ಕಾರಣಕ್ಕೆ ಭಾವಾಸ್ರವ ಅನ್ನು
ವರು.

೪೧೬. ಪ್ರ.—ದ್ರವ್ಯಾಸ್ರವ ಅಂದರೇನು ?

ಉ.—ದ್ರವ್ಯಬಂಧದ ಉಪಾದಾನ ಕಾರಣಕ್ಕೆ ಅಥವಾ
ಭಾವಬಂಧದ ನಿಮಿತ್ತಕಾರಣಕ್ಕೆ ದ್ರವ್ಯಾಸ್ರವ
ಅನ್ನುವರು.

೪೧೭ ಪ್ರ.—ಪ್ರಕೃತಿಬಂಧ ಮತ್ತು ಅನುಭಾಗಬಂಧ ಇವಗಳಲ್ಲಿ
ಭೇದವೇನು ?

ಉ.—ಪ್ರತಿಯೊಂದು ಪ್ರಕೃತಿಯ ಬೇರೆ ಬೇರೆ ಉಪಾದಾನ
ಶಕ್ತಿಯುಕ್ತ—ಅನೇಕ ಭೇದರೂಪ ಕಾರ್ಮಾಣ
ಸ್ಕಂಧದ ಸಂಬಂಧವು ಆತ್ಮದೊಡನೆ ಆಗುವದಕ್ಕೆ
ಪ್ರಕೃತಿಬಂಧ ಅನ್ನುವರು. ಮತ್ತು ಅದೇ ಸ್ಕಂಧದೊ
ಳಗಿನ ಫಲದಾನಶಕ್ತಿಯ ತಾರತಮ್ಯಕ್ಕೆ ( ನ್ಯೂನಾ
ಧಿಕ್ಯಕ್ಕೆ) ಅನುಭಾಗಬಂಧ ಅನ್ನುವರು.

೪೧೮ ಪ್ರ.—ಸರ್ವ ಪ್ರಕೃತಿಗಳ ಬಂಧಗಳ ಕಾರಣವು ಸಾಮಾನ್ಯವಾಗಿ ಯೋಗ ಆಗಿರುವದೋ ಅಥವಾ ಅದರಲ್ಲಿ ಮತ್ತೇನಾದರೂ ವಿಶೇಷ ಉಂಟೋ?

ಉ.—ಭಿನ್ನ ಭಿನ್ನ ಉಪಾದಾನ ಶಕ್ತಿಯುಕ್ತ ನಾನಾಪ್ರಕಾರಗಳ ಭೋಜನಗಳನ್ನು ಮನುಷ್ಯನು ಹ್ಯಾಗೆ ಹಸ್ತದ್ವಾರದಿಂದ ಇಚ್ಛಾವಿಶೇಷಪೂರ್ವಕ ಗ್ರಹಣ ಮಾಡುತ್ತಾನೆ, ಮತ್ತು ವಿಶೇಷ ಇಚ್ಛೆ ಇಲ್ಲದಿದ್ದರೆ, ಬರೇ ಉದರನಿರ್ವಾಹದ ಪೂರ್ತೆ ಭೋಜನ ಸಾಮಾನ್ಯವನ್ನು ಗ್ರಹಣಮಾಡುತ್ತಾನೆ, ಹಾಗೆ ಈ ಜೀವವು ಕಷಾಯಗಳ ಅಭಾವವಿರುವಾಗ ಕೇವಲ ಯೋಗದಿಂದ ಕೇವಲ ಸಾತಾವೇದನೀಯರೂಪ ಕರ್ಮವನ್ನು ಗ್ರಹಣ ಮಾಡುತ್ತದೆ; ಆದರೆ ಅದೇ ಯೋಗವು ಯಾವದೊಂದು ಕಷಾಯವಿಶೇಷದಿಂದ ಅನುರಂಜಿತವಾದರೆ, ಅನ್ಯೋನ್ಯ ಪ್ರಕೃತಿಯ ಬಂಧವನ್ನೂ ಮಾಡುತ್ತದೆ.

೪೧೯ ಪ್ರ.—ಪ್ರಕೃತಿಬಂಧಗಳ ಕಾರಣಗಳ ಅಪೇಕ್ಷೆಯಿಂದ ಆಸ್ರವಗಳಲ್ಲಿ ಭೇದಗಳೆಷ್ಟು?

ಉ.—ಐದು ಭೇದಗಳು. ಅವುಃ—೧ ಮಿಥ್ಯಾತ್ವ, ೨ ಅವಿ

ರತಿ, ೩ ಪ್ರಮಾದ, ೪ ಕಷಾಯ, ೫ ಯೋಗ.

೪೨೦ ಪ್ರ.—ಮಿಥ್ಯಾತ್ವ ಅಂದರೇನು ?

ಉ.—ಮಿಥ್ಯಾತ್ವ ಪ್ರಕೃತಿಯ ಉದಯದಿಂದ ಅದೇವದ ಸ್ಥಳದಲ್ಲಿ ದೇವಬುದ್ಧಿ, ಅತತ್ವಗಳಲ್ಲಿ ತತ್ವಬುದ್ಧಿ, ಅಧರ್ಮದಲ್ಲಿ ಧರ್ಮಬುದ್ಧಿ ಇತ್ಯಾದಿ ವಿಪರೀತಾಭಿನಿವೇಶರೂಪ ಜೀವದ ಪರಿಣಾಮವಾಗುವದಕ್ಕೆ ಮಿಥ್ಯಾತ್ವ ಅನ್ನುವರು.

೪೨೧ ಪ್ರ.—ಮಿಥ್ಯಾತ್ವದಲ್ಲಿ ಎಷ್ಟು ಭೇದಗಳು ?

ಉ.—ಐದು ಭೇದಗಳು. ಅವು:—೧ ಐಕಾಂತಿಕಮಿಥ್ಯಾತ್ವ, ೨ ವಿಪರೀತ ಮಿಥ್ಯಾತ್ವ, ೩ ಸಾಂಶಯಿಕ ಮಿಥ್ಯಾತ್ವ, ೪ ಅಜ್ಞಾನಿಕ ಮಿಥ್ಯಾತ್ವ, ೫ ವೈನಯಿಕ ಮಿಥ್ಯಾತ್ವ.

೪೨೨ ಪ್ರ.—ಐಕಾಂತಿಕ ಮಿಥ್ಯಾತ್ವ ಅಂದರೇನು ?

ಉ.—ಧರ್ಮ ಮತ್ತು ಧರ್ಮಿ ಇವುಗಳಿಗೆ “ ಇವು ಹೀಗೇ ಇರುವವು ಅನ್ಯಪ್ರಕಾರದವು ಇರುವದಿಲ್ಲ ” ಇತ್ಯಾದಿ ಒಂದೇ ಅಭಿಪ್ರಾಯ ಕೊಡುವದಕ್ಕೆ ಮಿಥ್ಯಾತ್ವ ಅನ್ನುವರು. ಉದಾ:—ಬೌದ್ಧಮತಾನುಯಾಯಿಯು ಪದಾರ್ಥಗಳನ್ನು ಸರ್ವಥಾ ಕ್ಷಣಿಕವೆಂದು ತಿಳಿಯುತ್ತಾನೆ.

೪೨೩ ಪ್ರ.– ವಿಪರೀತಮಿಥ್ಯಾತ್ವ ಅಂದರೇನು?

ಉ.—ಪರಿಗ್ರಹವನ್ನು ಧಾರಣಮಾಡುವಂಥ ನಿರ್ಗ್ರಂಥರು ಇದ್ದಾರೆ, ಕೇವಲಿಗಳು ಕವಳಾಹಾರವನ್ನು ತಕ್ಕೊಳ್ಳುತ್ತಾರೆ, ಇತ್ಯಾದಿ ಪ್ರಕಾರದಿಂದ ಶ್ರದ್ಧಾನವನ್ನು ಮಾಡುವದಕ್ಕೆ ವಿಪರೀತ ಮಿಥ್ಯಾತ್ವ ಅನ್ನುವರು.

೪೨೪ ಪ್ರ.—ಸಾಂಶಯಿಕ ಮಿಥ್ಯಾತ್ವ ಅಂದರೇನು?

ಉ.—ಧರ್ಮಕ್ಕೆ ಅಹಿಂಸಾಲಕ್ಷಣವು ಇರುವದೋ ಇಲ್ಲೋ ಇತ್ಯಾದಿಯಾಗಿ ಬುದ್ಧಿಯಲ್ಲಿ ದ್ವಿವಿಧತ್ವ ಉಂಟಾಗುವದಕ್ಕೆ ಸಂಶಯಮಿಥ್ಯಾತ್ವ ಅನ್ನುವರು.

೪೨೫ ಪ್ರ.—ಅಜ್ಞಾನಿಕ ಮಿಥ್ಯಾತ್ವ ಅಂದರೇನು?

ಉ.- -ಯಾವ ಸ್ಥಳದಲ್ಲಿ ಹಿತಾಹಿತ ವಿವೇಕದ ಏನೂ ಸದ್ಭಾವ ಇರುವದಿಲ್ಲವೋ, ಅದಕ್ಕೆ ಅಜ್ಞಾನಮಿಥ್ಯಾತ್ವ ಅನ್ನುವರು. ಉದಾ:—ಪಶುವಧವು ಧರ್ಮವೆಂದು ತಿಳಿಯೋಣ.

೪೨೬ ಪ್ರ.—ವೈನಯಿಕ ಮಿಥ್ಯಾತ್ವ ಅಂದರೇನು?

ಉ.—ಸರ್ವದೇವ ಮತ್ತು ಸರ್ವಧರ್ಮ ಇವ್ರುಗಳಲ್ಲಿ ಸಮಾನತ್ವವೇ ಇರುವದೆಂದು ತಿಳಿಯುವದಕ್ಕೆ ವೈನಯಿಕ ಮಿಥ್ಯಾತ್ವ ಅನ್ನುವರು.

೪೨೭ ಪ್ರ.—ಅವಿರತಿ ಅಂದರೇನು?

ಉ.—ಹಿಂಸಾದಿ ಪಾಪಗಳಲ್ಲಿ ಮತ್ತು ಇಂದ್ರಿಯ ಹಾಗು ಮನ ಇವುಗಳ ವಿಷಯಗಳಲ್ಲಿ ಪ್ರವೃತ್ತಿಯಾಗುವದೇ ಅವಿರತಿ ಎನಿಸುವದು.

೪೨೮ ಪ್ರ.—ಅವಿರತಿಗಳಲ್ಲಿ ಭೇದಗಳೆಷ್ಟು?

ಉ.—ಮೂರು. ಅವು—೧ ಅನಂತಾನುಬಂಧಿಕಷಾಯೋದಯಜನಿತ, ೨ ಅಪ್ರತ್ಯಾಖ್ಯಾನಾವರಣಕಷಾಯೋದಯಜನಿತ, ೩ ಪ್ರತ್ಯಾಖ್ಯಾನಾವರಣಕಷಾಯೋದಯಜನಿತ.

೪೨೯ ಪ್ರ.—ಪ್ರಮಾದ ಅಂದರೇನು?

ಉ.—ಸಂಜ್ವಲನ ಮತ್ತು ನೋಕಷಾಯ ಇವುಗಳ ತೀವ್ರ ಉದಯದಿಂದ, ನಿರತಿಚಾರ ಚಾರಿತ್ರ ಪಾಲನೆಮಾಡುವದರಲ್ಲಿ ಉತ್ಸಾಹ ಇಲ್ಲದೆ ಇರೋಣ ಮತ್ತು ಸ್ವಸ್ವರೂಪದ ಅಸಾವಧಾನತ್ವ ಇರೋಣ, ಇದೇ ಪ್ರಮಾದ ಎನಿಸುವದು.

೪೩೦ ಪ್ರ.—ಪ್ರಮಾದದಲ್ಲಿ ಭೇದಗಳೆಷ್ಟು?

ಉ.—ಹದಿನೈದು. ಅವು:—ವಿಕಥಾ ೪, (ಸ್ತ್ರೀಕಥೆ, ರಾಷ್ಟ್ರಕಥೆ, ಭೋಜನಕಥೆ, ರಾಜಕಥೆ) ಕಷಾಯ ೪, (ಸಂಜ್ವಲನದ ತೀವ್ರೋದಯದಿಂದ ಜನಿತವಾದ ಕ್ರೋಧ, ಮಾನ, ಮಾಯಾ, ಲೋಭ) ಇಂದ್ರಿಯ

ವಿಷಯ ೫, ನಿದ್ರಾ ೧, ಸ್ನೇಹ ೧. ಹೀಗೆ ೧೫.

೪೩೧ ಪ್ರ.—ಕಷಾಯ ಅಂದರೇನು?

ಉ.—ಸಂಜ್ವಲನ ಮತ್ತು ನೋಕಷಾಯ ಇವುಗಳ ಮಂದ ಉದಯದಿಂದ ಉತ್ಪನ್ನವಾಗುವ ಆತ್ಮದ ಪರಿಣಾಮ ವಿಶೇಷಕ್ಕೆ ಕಷಾಯ ಅನ್ನುವರು.

೪೩೨ ಪ್ರ.—ಯೋಗ ಅಂದರೇನು?

ಉ.—ಮನೋವರ್ಗಣಾ, ಕಾಯವರ್ಗಣಾ, ಮತ್ತು ವಚನ ವರ್ಗಣಾ ಇವುಗಳ ಅವಲಂಬನದಿಂದ, ಕರ್ಮನೋ ಕರ್ಮವನ್ನು ಗ್ರಹಣಮಾಡುವ ವಿಶೇಷ ಪ್ರಕಾರದ ಶಕ್ತಿಗೆ ಯೋಗ ಅನ್ನುವರು.

೪೩೩ ಪ್ರ.—ಯೋಗದಲ್ಲಿ ಭೇದಗಳೆಷ್ಟು?

ಉ.—ಹದಿನೈದು. ಅವು:—ಮನೋಯೋಗ ೪, (ಸತ್ಯ ಮನೋಯೋಗ, ಅಸತ್ಯಮನೋಯೋಗ, ಉಭಯ ಮನೋಯೋಗ, ಮತ್ತು ಅನುಭಯಮನೋ ಯೋಗ.) ಕಾಯಯೋಗ ೭, (ಔದಾರಿಕ, ಔದಾ ರಿಕಮಿಶ್ರ, ವೈಕ್ರಿಯಕ, ವೈಕ್ರಿಯಕಮಿಶ್ರ, ಆಹಾರಕ, ಆಹಾರಕಮಿಶ್ರ ಮತ್ತು ಕಾರ್ಮಾಣ.) ವಚನ ಯೋಗ ೪, (ಸತ್ಯವಚನಯೋಗ, ಅಸತ್ಯವಚನ

ಯೋಗ, ಉಭಯವಚನಯೋಗ ಹಾಗು ಅನುಭಯ ವಚನಯೋಗ.)

೪೩೪ ಪ್ರ.—ಮಿಥ್ಯಾತ್ವದ ಪ್ರಾಧಾನ್ಯವಿರುವಾಗ ಯಾವ ಯಾವ ಪ್ರಕೃತಿಗಳ ಬಂಧವಾಗುತ್ತದೆ?

ಉ.—ಹದಿನಾರು ಪ್ರಕೃತಿಗಳ ಬಂಧವಾಗುವದು. ಅವು:— ೧ ಮಿಥ್ಯಾತ್ವ, ೨ ಹುಂಡಕಸಂಸ್ಥಾನ, ೩ ನಪೂಂಸಕವೇದ, ೪ ನರಕಗತಿ, ೫ ನರಕಗತ್ಯಾನುಪೂರ್ವಿ, ೬ ನರಕಾಯು, ೭ ಅಸಂಪ್ರಾಪ್ತಾ ಸೃಪಾಟಿಕಾ ಸಂಹನನ, ನಾಲ್ಕು ಜಾತಿ, (೮ ಏಕೇಂದ್ರಿಯ, ೯ ದ್ವೀಂದ್ರಿಯ, ೧೦ ತ್ರೀಂದ್ರಿಯ, ೧೧ ಚತುರಿಂದ್ರಿಯ,) ೧೨ ಸ್ಥಾವರ, ೧೩ ಆತಾಪ, ೧೪ ಸೂಕ್ಷ್ಮ, ೧೫ ಅಪರ್ಯಾಪ್ತ, ಮುತ್ತು ೧೬ ಸಾಧಾರಣ.

೪೩೫ ಪ್ರ.—ಅನಂತಾನುಬಂಧಿಕಷಾಯೋದಯಜನಿತ ಅವಿರತಿಯಿಂದ ಯಾವ ಯಾವ ಪ್ರಕೃತಿಯ ಬಂಧವಾಗುವದು?

ಉ.—ಇಪ್ಪತ್ತೈದು ಪ್ರಕೃತಿಗಳ ಬಂಧವಾಗುವದು. ಅವು:—ಅನಂತಾನುಬಂಧಿ ಕ್ರೋಧ, ಮಾನ, ಮಾಯಾ, ಲೋಭ, ಸ್ತ್ಯಾನಗೃದ್ಧಿ, ನಿದ್ರಾ ನಿದ್ರಾ, ಪ್ರಚಲಾ ಪ್ರಚಲಾ, ದುರ್ಭಗ, ದುಃಸ್ವರ, ಅನಾ

ದೇಯ, ಅಪ್ರಶಸ್ತವಿಹಾಯೋಗತಿ, ಸ್ತ್ರೀವೇದ, ನೀಚಗೋತ್ರ, ತಿರ್ಯಗ್ಗತಿ, ತಿರ್ಯಗ್ಗತ್ಯಾನಪೂರ್ವಿ, ತಿರ್ಯಗ್ಗಾಯು, ಉದ್ಯೋತ, ಸಂಸ್ಥಾನ ೪ (ನ್ಯಗ್ರೋಧ, ಸ್ವಾತಿ, ಕುಬ್ಜಕ, ವಾಮನ) ಸಂಹನನ ೪ (ವಜ್ರನಾರಾಚ, ನಾರಾಚ, ಅರ್ಧನಾರಾಚ ಮತ್ತು ಕೀಲಿತ) ಹೀಗೆ ಒಟ್ಟು ೨೫.

೪೩೬ ಪ್ರ.—ಅಪ್ರತ್ಯಾಖ್ಯಾನಾವರಣಕಷಾಯೋದಯಜನಿತ ಅವಿರತಿಯಿಂದ ಯಾವ ಯಾವ ಪ್ರಕೃತಿಗಳ ಬಂಧವಾಗುತ್ತದೆ?

ಉ.—ಹತ್ತು ಪ್ರಕೃತಿಗಳ ಬಂಧವಾಗುವದು. ಅವು:— ಅಪ್ರತ್ಯಾಖ್ಯಾನಾವರಣ ಕ್ರೋಧ, ಮಾನ, ಮಾಯಾ, ಲೋಭ, ಮನುಷ್ಯಗತಿ, ಮನುಷ್ಯಗತ್ಯಾನುಪೂರ್ವಿ, ಮನುಷ್ಯಾಯು, ಔದಾರಿಕಶರೀರ, ಔದಾರಿಕಾಂಗೋಪಾಂಗ ಮತ್ತು ವಜ್ರಋಷಭನಾರಾಚ ಸಂಹನನ.

೪೩೭ ಪ್ರ.—ಪ್ರತ್ಯಾಖ್ಯಾನಾವರಣಕಷಾಯೋಜನಿತ ಅವಿರತಿಯಿಂದ ಯಾವ ಯಾವ ಪ್ರಕೃತಿಗಳ ಬಂಧವಾಗುತ್ತದೆ?

ಉ.—ನಾಲ್ಕು ಪ್ರಕೃತಿಗಳ ಬಂಧವಾಗುವದು. ಅವು:—

ಪ್ರತ್ಯಾಖ್ಯಾನಾವರಣ ಕ್ರೋಧ, ಮಾನ, ಮಾಯಾ, ಲೋಭ.

೪೩೮ ಪ್ರ.—ಪ್ರಮಾದದಿಂದ ಎಷ್ಟು ಪ್ರಕೃತಿಗಳ ಬಂಧವಾಗುವದು?

ಉ.—ಆರು ಪ್ರಕೃತಿಗಳ ಬಂಧವಾಗುವದು. ಅವು:— ಅಸ್ಥಿರ, ಅಶುಭ, ಅಸಾತಾವೇದನೀಯ, ಅಯಶಃ ಕೀರ್ತಿ, ಅರತಿ ಮತ್ತು ಶೋಕ.

೪೩೯ ಪ್ರ.—ಕಷಾಯಗಳ ಉದಯದಿಂದ ಎಷ್ಟು ಪ್ರಕೃತಿಗಳ ಬಂಧವಾಗುವದು?

ಉ.—ಐವತ್ತೆಂಟು ಪ್ರಕೃತಿಗಳ ಬಂಧವಾಗುವದು. ಅವು:—ದೇವಾಯು, ನಿದ್ರಾ, ಪ್ರಚಲಾ, ತೀರ್ಥಕರ, ನಿರ್ಮಾಣ, ಪ್ರಶಸ್ತ ವಿಹಾಯೋಗತಿ, ಪಂಚೇಂದ್ರಿಯ ಜಾತಿ, ತೈಜಸ ಶರೀರ, ಕಾರ್ಮಾಣ ಶರೀರ, ಆಹಾರಕ ಶರೀರ, ಆಹಾರಕಾಂಗೋಪಾಂಗ, ಸಮಚತುರಸ್ರಸಂಸ್ಥಾನ, ವೈಕ್ರಿಯಕ ಶರೀರ, ವೈಕ್ರಿಯಕಾಂಗೋಪಾಂಗ, ದೇವಗತಿ, ದೇವಗತ್ಯಾನುಪೂರ್ವಿ, ರೂಪ, ರಸ, ಗಂಧ, ಸ್ಪರ್ಶ, ಅಗುರುಲಘು, ಉಪಘಾತ, ಪರಘಾತ, ಉಚ್ಛ್ವಾಸ, ತ್ರಸ, ಬಾದರ, ಪರ್ಯಾಪ್ತ, ಪ್ರತ್ಯೇಕ, ಸ್ಥಿರ, ಶುಭ,

ಸುಭಗ, ಸುಸ್ವರ, ಆದೇಯ, ಹಾಸ್ಯ, ರತಿ, ಜುಗುಪ್ಸಾ, ಭಯ, ಪುರುಷವೇದ, ಸಂಜ್ವಲನ ಕ್ರೋಧ, ಮಾನ, ಮಾಯಾ, ಲೋಭ, ಮತಿಜ್ಞಾನಾವರಣ, ಶ್ರುತ ಜ್ಞಾನಾವರಣ, ಅವಧಿಜ್ಞಾನಾವರಣ, ಮನಃಪ ರ್ಯಯಜ್ಞಾನಾವರಣ, ಕೇವಲಜ್ಞಾನಾವರಣ, ಚಕ್ಷುರ್ದರ್ಶನಾವರಣ, ಅಚಕ್ಷುರ್ದರ್ಶನಾವರಣ, ಅವಧಿದರ್ಶನಾವರಣ, ಕೇವಲದರ್ಶನಾವರಣ, ದಾನಾಂತರಾಯ, ಭೋಗಾಂತರಾಯ, ಉಪಭೋ ಗಾಂತರಾಯ, ವೀರ್ಯಾಂತರಾಯ, ಲಾಭಾಂತ ರಾಯ, ಯಶಸ್ಕೀರ್ತಿ, ಮತ್ತು ಉಚ್ಚಗೋತ್ರ, ಹೀಗೆ ಒಟ್ಟಿಗೆ ೫೮ ಪ್ರಕೃತಿಬಂಧಗಳು.

೪೪೦ ಪ್ರ.—ಯೋಗದ ನಿಮಿತ್ತದಿಂದ ಯಾವ ಪ್ರಕೃತಿಯು ಬಂಧ ವಾಗುತ್ತದೆ?

ಉ.—ಏಕಾಸಾತಾವೇದನೀಯ ಪ್ರಕೃತಿಯು ಬಂಧವಾಗು ತ್ತದೆ.

೪೪೧ ಪ್ರ.—ಸರ್ವ ಕರ್ಮಪ್ರಕೃತಿಗಳು ೧೪೮ ಇದ್ದು, ಆ ಪ್ರಕೃ ತಿಗಳ ಕಾರಣಗಳು ೧೨೦ ಹೇಳಲ್ಪಟ್ಟವು; ಉಳಿದ ೨೮ ಪ್ರಕೃತಿಗಳು ಏನಾದವು?

ಉ.—ಸ್ಪರ್ಶಾದಿ ೨೦ ಪ್ರಕೃತಿಗಳ ಸ್ಥಳದಲ್ಲಿ ೪ ಪ್ರಕೃತಿ

ಗಳನ್ನು ಗ್ರಹಣಮಾಡಿದ್ದರಿಂದ ಇದರಲ್ಲಿ ಹದಿನಾರು ಕಡಿಮೆಯಾದವು; ಮತ್ತು ಐದು ಶರೀರಗಳ ಐದು ಬಂಧನಗಳನ್ನೂ, ಐದು ಸಂಘಾತಗಳನ್ನೂ ಗ್ರಹಣ ಮಾಡಲಿಲ್ಲಾದ್ದರಿಂದ ಇವು ಹತ್ತು ಕಡಿಮೆ ಆದವು. ಮತ್ತು ಸಮ್ಯಗ್‌ಮಿಥ್ಯಾತ್ವ ಹಾಗು ಸಮ್ಯಗ್‌ಪ್ರಕೃತಿ ಮಿಥ್ಯಾತ್ವ ಇವುಗಳ ಬಂಧವಾಗುವದಿಲ್ಲಾದ್ದರಿಂದ ಇವೆರಡು ಕಡಿಮೆ; ಹೀಗೆ ಒಟ್ಟಿಗೆ ೨೮ ಪ್ರಕೃತಿ ಗಳನ್ನು ತಿಳಿಯಬೇಕು. ಸಮ್ಯಗ್‌ದೃಷ್ಟಿಜೀವವು ಪೂರ್ವಬದ್ಧಮಿಥ್ಯಾತ್ವಪ್ರಕೃತಿಯಲ್ಲಿ ಮೂರು ಭಾಗ ಗಳನ್ನು ಮಾಡುತ್ತದೆ, ಆಗ ಅದಕ್ಕೆ ಈ ಎರಡು ಪ್ರಕೃತಿಗಳ ಪ್ರಾದುರ್ಭಾವಿರುವದು. ಅಂತೇ ಪುನಃ ಅದರ ಬಂಧವಾಗುವದಿಲ್ಲ.

೪೪೨ ಪ್ರ.—ದ್ರವ್ಯಾಸ್ರವದ ಭೇದಗಳೆಷ್ಟು?

ಉ.—ಎರಡು. ಅವು:—೧ ಸಾಂಪರಾಯಿಕ, ೨ ಈರ್ಯಾ ಪಥ.

೪೪೩ ಪ್ರ.—ಸಾಂಪರಾಯಿಕ ಆಸ್ರವ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮಪರಮಾಣುಗಳು ಜೀವಿಗಳ ಕಷಾಯ ಭಾವಗಳ ನಿಮಿತ್ತದಿಂದ ಆತ್ಮದೊಳಗೆ ಕೆಲವು ಕಾಲ ದವರೆಗೆ ಅವಸ್ಥಾನಮಾಡಿಕೊಂಡಿರುತ್ತವೆಯೋ, ಆ

ಕರ್ಮಪರಮಾಣುಗಳ ಆಸ್ರವಕ್ಕೆ ಸಾಂಪರಾಯಿಕ ಆಸ್ರವ ಅನ್ನುತ್ತಾರೆ.

೪೪೪ ಪ್ರ.—ಈರ್ಯಾಪಥ ಆಸ್ರವ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಕರ್ಮಪರಮಾಣುಗಳ ಬಂಧ, ಉದಯ ಹಾಗು ನಿರ್ಜರಾ, ಈ ಮೂರೂ ಒಂದೇ ಸಮಯದಲ್ಲಿ ಆಗುವವೋ, ಆ ಕರ್ಮಪರಮಾಣುಗಳ ಆಸ್ರವಕ್ಕೆ ಈರ್ಯಾಪಥ ಆಸ್ರವ ಅನ್ನುವರು.

೪೪೫ ಪ್ರ.—ಈ ಎರಡೂ ಪ್ರಕಾರದ ಆಸ್ರವಗಳ ಸ್ವಾಮಿ ಯಾರು?

ಉ.—ಸಾಂಪರಾಯಿಕ ಆಸ್ರವದ ಸ್ವಾಮಿಯು ಕಷಾಯಯುಕ್ತ ಆತ್ಮಾ, ಮತ್ತು ಈರ್ಯಾಪಥ ಆಸ್ರವದ ಸ್ವಾಮಿಯು ಕಷಾಯರಹಿತ ಆತ್ಮಾ.

೪೪೬ ಪ್ರ.—ಪುಣ್ಯಾಸ್ರವ ಮತ್ತು ಪಾಪಾಸ್ರವಗಳ ಕಾರಣಗಳ್ಯಾವು

ಉ.—ಶುಭಯೋಗವು ಪುಣ್ಯಾಸ್ರವದ ಹಾಗು ಅಶುಭಯೋಗವು ಪಾಪಾಸ್ರವದ ಕಾರಣಗಳಾಗಿರುವವು.

೪೪೭ ಪ್ರ.—ಶುಭಯೋಗ ಮತ್ತು ಅಶುಭಯೋಗ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಶುಭಪರಿಣಾಮದಿಂದುಂಟಾದ್ದಕ್ಕೆ ಶುಭಯೋಗವೆಂತಲೂ, ಅಶುಭಪರಿಣಾಮದಿಂದುಂಟಾದ್ದಕ್ಕೆ ಅಶುಭಯೋಗವೆಂತಲೂ ಅನ್ನುವರು.

೪೪೮ ಪ್ರ.—ಶುಭಯೋಗವಿದ್ದಾಗ ಜೀವಕ್ಕೆ ಪಾಪಕೃತಿಯ ಆಸ್ರವವು ಆಗುವದೋ ಇಲ್ಲೋ?

ಉ.—ಆಗುತ್ತದೆ.

೪೪೯ ಪ್ರ.—ಆಗುತ್ತದೆಂದು ಅಂದಮೇಲೆ, ಶುಭಯೋಗವು ಪಾಪಾಸ್ರವಕ್ಕೆ ಕಾರಣವಾಗಿರುತ್ತದೆಂದು ನಿರ್ಣಯವಾಗುವದಿಲ್ಲವೋ?

ಉ.—ನಿರ್ಣಯವಾಗುವದಿಲ್ಲ. ಯಾಕಂದರೆ, ಯಾವಾಗ್ಗೆ ಜೀವದಲ್ಲಿ ಶುಭಯೋಗವು ಉತ್ಪನ್ನವಾಗುವದೋ, ಆಗ್ಗೆ ಪುಣ್ಯಪ್ರಕೃತಿಯೊಳಗಿನ ಸ್ಥಿತಿ ಮತ್ತು ಅನುಭಾಗ ಇವು ಹೆಚ್ಚಾಗುತ್ತವೆ, ಮತ್ತು ಪಾಪಪ್ರಕೃತಿಯೊಳಗಿನ ಸ್ಥಿತಿ ಹಾಗು ಅನುಭಾಗ ಇವು ಕಡಿಮೆಯಾಗುತ್ತವೆ. ಇದರಂತೆಯೇ ಯಾವಾಗ್ಗೆ ಅಶುಭಯೋಗವು ಇರುವದೋ, ಆಗ್ಗೆ ಪಾಪಪ್ರಕೃತಿಯೊಳಗಿನ ಸ್ಥಿತಿ ಮತ್ತು ಅನುಭಾಗ ಅಧಿಕವಾಗಿ ಪುಣ್ಯಪ್ರಕೃತಿಯಲ್ಲಿ ಅವು ಕಡಿಮೆಯಾಗುತ್ತವೆ. ತತ್ವಾರ್ಥಸೂತ್ರದೊಳಗಿನ ಆರನೆಯ ಅಧ್ಯಾಯದಲ್ಲಿ ಜ್ಞಾನಾವರಣಾದಿ ಪ್ರಕೃತಿಗಳ ಆಸ್ರವಗಳ ಕಾರಣಗಳನ್ನು ಹೇಳುವಾಗ "ತತ್ಪ್ರದೋಷನಿಷ್ಹವಾದಿಕ" ಎಂದು ಹೇಳಲ್ಪಟ್ಟಿರುವದು. ಅದರ ಅಭಿಪ್ರಾಯವಾದರೂ

ಇದೇ ಇರುವದು. ಅಂದರೆ ಆಯಾ ಪರಿಣಾಮಗ ಳಿಂದ ಆಯಾ ಪ್ರಕೃತಿಗಳಲ್ಲಿ ಸ್ಥಿತಿ ಅನುಭಾಗಗಳು ಅಧಿಕಾಧಿಕ ಬೀಳುವವು. ಹೀಗೆ ಒಂದು ವೇಳೆ ತಿಳಿ ಯದಿದ್ದರೆ, ಎರಡನೆಯ ಯಾವ ಜ್ಞಾನಾವರಣಾದಿ ಪಾಪಕೃತಿಗಳ ಆಸ್ರವ ಹತ್ತನೆಯ ಗುಣಸ್ಥಾನದ ವರೆಗೆ ಹೇಳಿರುವದೋ, ಅದರಲ್ಲಿ ವಿರೋಧ ಬರು ವದು, ಅಥವಾ ಶುಭಯೋಗದ ಅಭಾವದ ಪ್ರಸಂಗ ವು ಪ್ರಾಪ್ತವಾಗುವದು. ಯಾಕಂದರೆ ಶುಭಯೋಗ ವು ಹತ್ತನೆಯ ಗುಣಸ್ಥಾನದ ಅಗದಿ ಮೊದಮೊದಲು ಆಗುತ್ತಿರುತ್ತದೆ.

---

# ೪ನೆಯ ಅಧ್ಯಾಯ.



೪೫೦ ಪ್ರ.—ಜೀವದ ಅಸಾಧಾರಣ ಭಾವಗಳೆಷ್ಟು?

ಉ.—ಐದು. ಅವು:—೧ ಔಪಶಮಿಕ, ೨ ಕ್ಷಾಯಿಕ, ೩ ಕ್ಷಾಯೋಪಶಮಿಕ, ೪ ಔದಯಿಕ, ೫ ಪಾರಿ ಣಾಮಿಕ.

೪೫೧ ಪ್ರ.—ಔಪಶಮಿಕಭಾವ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಭಾವವು ಯಾವದಾದರೊಂದು ಕರ್ಮದ ಉಪಶಮದಿಂದಾಗುವದೋ, ಅದಕ್ಕೆ ಔಪಶಮಿಕ ಭಾವ ಅನ್ನುವರು.

೪೫೨ ಪ್ರ.—ಕ್ಷಾಯಿಕಭಾವ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಭಾವವು ಯಾವದೊಂದು ಕರ್ಮಕ್ಷಯ ದಿಂದ ಉತ್ಪನ್ನವಾಗುವದೋ, ಆ ಭಾವಕ್ಕೆ ಕ್ಷಾಯಿ ಕಭಾವ ಅನ್ನುವರು.

೪೫೩ ಪ್ರ.—ಕ್ಷಾಯೋಪಶಮಿಕಭಾವ ಎಂದು ಯಾತಕ್ಕೆ ಅನ್ನು ವರು?

ಉ.—ಯಾವ ಭಾವವು ಕರ್ಮದ ಕ್ಷಯೋಪಶಮದಿಂದ ಉತ್ಪನ್ನವಾಗುವದೋ, ಅದಕ್ಕೆ ಕ್ಷಾಯೋಪಶಮಿ ಕಭಾವ ಅನ್ನುವರು.

೪೫೪ ಪ್ರ.—ಔದಯಿಕಭಾವ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಭಾವವು ಕರ್ಮದ ಉದಯದಿಂದ ಉತ್ಪನ್ನ ವಾಗುವದೋ, ಅದಕ್ಕೆ ಔದಯಿಕಭಾವ ಅನ್ನು ವರು.

೪೫೫ ಪ್ರ.—ಪಾರಿಣಾಮಿಕಭಾವ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಭಾವವು ಉಪಶಮ, ಕ್ಷಯ, ಕ್ಷಯೋಪಶಮ ಹಾಗು ಉದಯ ಇವುಗಳ ಅಪೇಕ್ಷೆಯನ್ನು ಹಿಡಿ

ಯದೆ, ಕೇವಲ ಜೀವದ ಸ್ವಭಾವದಿಂದಲೇ ಆಗು ವದೋ, ಅದಕ್ಕೆ ಪಾರಿಣಾಮಿಕಭಾವ ಅನ್ನುವರು.

೪೫೬ ಪ್ರ.—ಔಪಶಮಿಕ ಭಾವದಲ್ಲಿ ಎಷ್ಟು ಭೇದಗಳಿರುವವು?

ಉ.—ಎರಡು ಅವು:—೧ ಸಮ್ಯಕ್ತ್ವಭಾವ, ೨ ಚಾರಿತ್ರ ಭಾವ.

೪೫೭ ಪ್ರ.—ಕ್ಷಾಯಿಕ ಭಾವದಲ್ಲಿ ಎಷ್ಟು ಭೇದಗಳಿರುವವು?

ಉ.—ಒಂಬತ್ತು ಭೇದಗಳು. ಅವು:—೧ ಕ್ಷಾಯಿಕ ಸಮ್ಯಕ್ತ್ವ, ೨ ಕ್ಷಾಯಿಕಚರಿತ್ರ, ೩ ಕ್ಷಾಯಿಕದರ್ಶನ, ೪ ಕ್ಷಾಯಿಕಜ್ಞಾನ, ೫ ಕ್ಷಾಯಿಕದಾನ, ೬ ಕ್ಷಾಯಿ ಕಲಾಭ, ೭ ಕ್ಷಾಯಿಕಭೋಗ, ೮ ಕ್ಷಾಯಿಕ ಉಪಭೋಗ, ೯ ಕ್ಷಾಯಿಕವೀರ್ಯ.

೪೫೮ ಪ್ರ.—ಕ್ಷಾಯೋಪಶಮಿಕ ಭಾವದಲ್ಲಿ ಎಷ್ಟು ಭೇದಗಳು?

ಉ.—ಹದಿನೆಂಟು. ಅವು:—೧ ಸಮ್ಯಕ್ತ್ವ, ೨ ಚಾರಿತ್ರ, ೩ ಚಕ್ಷುರ್ದರ್ಶನ, ೪ ಅಚಕ್ಷುರ್ದರ್ಶನ, ೫ ಅವಧಿದ ರ್ಶನ, ೬ ದೇಶಸಂಯಮ, ೭ ಮತಿಜ್ಞಾನ, ೮ ಶ್ರುತ ಜ್ಞಾನ ೯ ಅವಧಿಜ್ಞಾನ, ೧೦ ಮನಃಪರ್ಯಯ ಜ್ಞಾನ, ೧೧ ಕುಮತಿಜ್ಞಾನ, ೧೨ ಕುಶ್ರುತಜ್ಞಾನ, ೧೩ ಕುಅವಧಿಜ್ಞಾನ, ೧೪ ದಾನ, ೧೫ ಲಾಭ, ೧೬ ಭೋಗ, ೧೭ ಉಪಭೋಗ, ಮತ್ತು ೧೮ ವೀರ್ಯ.

೪೬೯ ಪ್ರ—ಔದಯಿಕ ಭಾವಗಳು ಎಷ್ಟು ಇರುವವು?
ಉ.—ಇಪ್ಪತ್ತೊಂದು. ಅವು:—ಗತಿ ೪, ಕಷಾಯ ೪ ಲಿಂಗ ೩, ಮಿಥ್ಯಾದರ್ಶನ ೧, ಅಜ್ಞಾನ ೧, ಅಸಂಯಮ ೧, ಅಸಿದ್ಧತ್ವ ೧, ಲೇಶ್ಯಾ ೬ (ಪೀತ, ಪದ್ಮ, ಶುಕ್ಲ, ಕೃಷ್ಣ, ನೀಲ, ಕಾಪೋತ).

೪೬೦ ಪ್ರ.—ಪಾರಿಣಾಮಿಕ ಭಾವಗಳು ಎಷ್ಟು ಇರುವವು?
ಉ.—ಮೂರು. ಅವು:—೧ ಜೀವತ್ವ, ೨ ಭವ್ಯತ್ವ, ೩ ಅಭವ್ಯತ್ವ.

೪೬೧ ಪ್ರ.—ಲೇಶ್ಯಾ ಅಂದರೇನು?
ಉ.—ಕಷಾಯಗಳ ಉದಯದಿಂದ ಅನುರಂಜಿತವಾದ ಯೋಗಪ್ರವೃತ್ತಿಗೆ ಭಾವಲೇಶ್ಯಾ ಎಂತಲೂ, ಶರೀರದ ಪೀತಪದ್ಮಾದಿ ವರ್ಣಗಳಿಗೆ ದ್ರವ್ಯಲೇಶ್ಯಾ ಎಂತಲೂ ಅನ್ನುವರು.

೪೬೨ ಪ್ರ—ಉಪಯೋಗ ಎಂದು ಯಾತಕ್ಕೆ ಅನ್ನುವರು?
ಉ.—ಜೀವದ ಲಕ್ಷಣಸ್ವರೂಪಿ ಚೈತನ್ಯವನ್ನು ಅನುಸರಿಸಿ ಇರುವಂಥ ಪರಿಣಾಮಕ್ಕೆ ಉಪಯೋಗ ಅನ್ನುವರು.

೪೬೩ ಪ್ರ—ಉಪಯೋಗದಲ್ಲಿ ಭೇದಗಳೆಷ್ಟು?
ಉ.—ಎರಡು. ಅವು:—೧ ದರ್ಶನೋಪಯೋಗ, ೨ ಜ್ಞಾನೋಪಯೋಗ.

೪೬೪ ಪ್ರ.—ದರ್ಶನೋಪಯೋಗದಲ್ಲಿ ಭೇದಗಳೆಷ್ಟು?

ಉ.—ನಾಲ್ಕು. ಅವು:—೧ ಚಕ್ಷುರ್ದರ್ಶನ, ೨ ಅಚಕ್ಷುರ್ದರ್ಶನ, ೩ ಅವಧಿದರ್ಶನ, ೪ ಕೇವಲದರ್ಶನ.

೪೬೫ ಪ್ರ.—ಜ್ಞಾನೋಪಯೋಗದಲ್ಲಿ ಭೇದಗಳೆಷ್ಟು?

ಉ.—ಎಂಟು. ಅವು:—೧ ಮತಿಜ್ಞಾನ, ೨ ಶ್ರುತಜ್ಞಾನ, ೩ ಅವಧಿಜ್ಞಾನ, ೪ ಮನಃಪರ್ಯಯಜ್ಞಾನ, ೫ ಕೇವಲಜ್ಞಾನ, ೬ ಕುಮತಿಜ್ಞಾನ, ೭ ಕುಶ್ರುತಜ್ಞಾನ, ೮ ಕುಅವಧಿಜ್ಞಾನ.

೪೬೬ ಪ್ರ.—ಸಂಜ್ಞಾ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಅಭಿಲಾಷೆಗೆ (ಇಚ್ಛೆಗೆ) ಸಂಜ್ಞಾ ಅನ್ನುವರು.

೪೬೭ ಪ್ರ.—ಸಂಜ್ಞೆಯಲ್ಲಿ ಎಷ್ಟು ಭೇದಗಳುಂಟು?

ಉ.—ನಾಲ್ಕು. ಅವು:—೧ ಆಹಾರ, ೨ ಭಯ, ೩ ಮೈಥುನ, ೪ ಪರಿಗ್ರಹ.

೪೬೮ ಪ್ರ.—ವರ್ಗಣಾ ಅಂದರೇನು?

ಉ.— ಯಾವ ಯಾವ ಧರ್ಮವಿಶೇಷಗಳಿಂದ ಜೀವದ ಅನ್ವೇಷಣವು (ಶೋಧವು) ಮಾಡಲ್ಪಡುವದೋ, ಆಯಾ ಧರ್ಮವಿಶೇಷಗಳಿಗೆ ಮಾರ್ಗಣಾ ಅನ್ನುವರು.

೪೬೯ ಪ್ರ.—ಮಾರ್ಗಣದಲ್ಲಿ ಭೇದಗಳೆಷ್ಟು?

ಉ.—ಹದಿನಾಲ್ಕು. ಅವು:— ಗತಿ, ಇಂದ್ರಿಯ, ಕಾಯ,

ಯೋಗ, ವೇದ, ಕಷಾಯ, ಜ್ಞಾನ, ಸಂಯಮ, ದರ್ಶನ, ಲೇಶ್ಯಾ, ಭವ್ಯತ್ವ, ಸಮ್ಯಕ್ತ್ವ, ಸಂಜಿತ್ವ ಮತ್ತು ಆಹಾರ.

೪೭೦ ಪ್ರ.—ಗತಿ ಅಂದರೇನು?

ಉ.—ಗತಿನಾಮಕ ನಾಮಕರ್ಮದ ಉದಯದಿಂದ ಜೀವಕ್ಕೆ ಯಾವ ಪರ್ಯಾಯವಿಶೇಷ ಪ್ರಾಪ್ತಿಯಾಗುವದೋ, ಅದಕ್ಕೆ ಗತಿ ಅನ್ನುವರು.

೪೭೧ ಪ್ರ.—ಗತಿಯಲ್ಲಿ ಭೇದಗಳೆಷ್ಟು?

ಉ.—ನಾಲ್ಕು. ಅವು:- ನರಕಗತಿ, ತಿರ್ಯಂಚಗತಿ, ಮನುಷ್ಯಗತಿ, ದೇವಗತಿ.

೪೭೨ ಪ್ರ.—ಇಂದ್ರಿಯ ಅಂದರೇನು?

ಉ.—ಆತ್ಮದ ಲಿಂಗಕ್ಕೆ (ಚಿನ್ಹಕ್ಕೆ) ಇಂದ್ರಿಯ ಅನ್ನುವರು.

೪೭೩ ಪ್ರ.—ಇಂದ್ರಿಯಗಳಲ್ಲಿ ಭೇದಗಳೆಷ್ಟು?

ಉ.—ಎರಡು. ಅವು:—೧ ದ್ರವ್ಯೇಂದ್ರಿಯ, ೨ ಭಾವೇಂದ್ರಿಯ.

೪೭೪ ಪ್ರ.—ದ್ರವ್ಯೇಂದ್ರಿಯ ಅಂದರೇನು?

ಉ.—ನಿರ್ವೃತ್ತಿ ಮತ್ತು ಉಪಕರಣ ಇವುಗಳಿಗೆ ದ್ರವ್ಯೇಂದ್ರಿಯ ಅನ್ನುವರು.

೪೭೫ ಪ್ರ.—ನಿರ್ವೃತ್ತಿ ಅಂದರೇನು?

ಉ.—ಪ್ರದೇಶಗಳ ರಚನೆಗೆ ನಿರ್ವೃತ್ತಿ ಅನ್ನುವರು.

೪೨೬ ಪ್ರ.—ನಿರ್ವೃತ್ತಿಯಲ್ಲಿ ಭೇದಗಳೆಷ್ಟು?

ಉ.—ಎರಡು. ಅವು:—೧ ಬಾಹ್ಯ, ೨ ಅಭ್ಯಂತರ.

೪೨೭ ಪ್ರ.—ಬಾಹ್ಯನಿರ್ವೃತ್ತಿ ಅಂದರೇನು?

ಉ.—ಇಂದ್ರಿಯಗಳ ಆಕಾರಸ್ವರೂಪಿಯಾದ ಪುದ್ಗಲದ ವಿಶೇಷ ಪ್ರಕಾರದ ರಚನೆಗೆ ಬಾಹ್ಯನಿರ್ವೃತ್ತಿ ಅನ್ನುವರು.

೪೨೮ ಪ್ರ—ಅಭ್ಯಂತರ ನಿರ್ವೃತ್ತಿ ಅಂದರೇನು?

ಉ.—ಆತ್ಮದ ವಿಶುದ್ಧಪ್ರದೇಶಗಳ ಇಂದ್ರಿಯಾಕಾರಗಳ ರಚನೆಗೆ ಅಭ್ಯಂತರ ನಿರ್ವೃತ್ತಿ ಅನ್ನುವರು.

೪೨೯ ಪ್ರ.—ಉಪಕರಣ ಅಂದರೇನು?

ಉ.—ಯಾವದು ನಿರ್ವೃತ್ತಿಗೆ ಉಪಕಾರ ಮಾಡುವದೋ, ಅದಕ್ಕೆ ಉಪಕರಣ ಅನ್ನುವರು.

೪೩೦ ಪ್ರ.—ಉಪಕರಣದಲ್ಲಿ ಭೇದಗಳೆಷ್ಟು?

ಉ.—ಎರಡು. ಅವು:—೧ ಅಭ್ಯಂತರ, ಮತ್ತು ೨ ಬಾಹ್ಯ.

೪೩೧ ಪ್ರ.—ಅಭ್ಯಂತರ ಉಪಕರಣ ಎಂದು ಯಾತಕ್ಕೆ ಅನ್ನುವರು?

ಉ.—ಕಣ್ಣೊಳಗಿನ ಕರೇ, ಬಿಳೇ ಗೊಂಬಿಗಳಂತೆ ಸರ್ವ ಇಂದ್ರಿಯಗಳೊಳಗೆ ಯಾವದು ನಿರ್ವೃತ್ತಿಗೆ ಉಪ

ಕಾರ ಮಾಡುವದೋ, ಅದಕ್ಕೆ ಅಭ್ಯಂತರ ಉಪಕ
ರಣ ಅನ್ನುವರು.

೪೮೨ ಪ್ರ.—ಬಾಹ್ಯೋಪಕರಣ ಅಂದರೇನು?

ಉ.—ಕಣ್ಣೊಳಗಿನ ಪಾಪುದ್ರಿ ಮೊದಲಾದವುಗಳಂತೆ ಯಾ
ವದು ನಿರ್ವೃತ್ತಿಗೆ ಉಪಕಾರ ಮಾಡುವದೋ, ಅದ
ಕ್ಕೆ ಬಾಹ್ಯೋಪಕರಣ ಅನ್ನುವರು.

೪೮೩ ಪ್ರ.—ಭಾವೇಂದ್ರಿಯ ಅಂದರೇನು?

ಉ.—ಲಬ್ಧಿ ಮತ್ತು ಉಪಯೋಗ ಇವಕ್ಕೆ ಭಾವೇಂದ್ರಿಯ
ಅನ್ನುವರು.

೪೮೪ ಪ್ರ.—ಲಬ್ಧಿ ಅಂದರೇನು?

ಉ.—ಜ್ಞಾನಾವರಣ ಕರ್ಮಗಳ ಕ್ಷಯೋಪಶಮಕ್ಕೆ ಲಬ್ಧಿ
ಅನ್ನುವರು.

೪೮೫ ಪ್ರ.—ಉಪಯೋಗ ಅಂದರೇನು?

ಉ.—ಕ್ಷಯೋಪಶಮಹೇತುಕ ಚೈತನ್ಯದ ಪರಿಣಾಮ
ವಿಶೇಷಕ್ಕೆ ಉಪಯೋಗವೆನ್ನುವರು.

೪೮೬ ಪ್ರ.—ದ್ರವ್ಯೇಂದ್ರಿಯದಲ್ಲಿ ಎಷ್ಟು ಭೇದಗಳು?

ಉ.—ಐದು. ಅವು:—೧ ಸ್ಪರ್ಶ, ೨ ರಸನ, ೩ ಘ್ರಾಣ,
೪ ಚಕ್ಷು, ೫ ಶ್ರೋತ್ರ.

೪೮೭ ಪ್ರ.—ಸ್ಪರ್ಶೇಂದ್ರಿಯ ಅಂದರೇನು?

ಉ.—ಯಾತರ ದ್ವಾರದಿಂದ ಎಂಟು ಪ್ರಕಾರದ ಸ್ಪರ್ಶಗಳ ಜ್ಞಾನವಾಗುವದೋ, ಅದಕ್ಕೆ ಸ್ಪರ್ಶೇಂದ್ರಿಯ ಅನ್ನುವರು.

೪೮೮ ಪ್ರ.—ರಸನೇಂದ್ರಿಯ ಅಂದರೇನು?

ಉ.—ಯಾತರ ದ್ವಾರದಿಂದ ಐದು ಪ್ರಕಾರದ ರಸಗಳ (ಸ್ವಾದಗಳ) ಜ್ಞಾನವಾಗುವದೋ, ಅದಕ್ಕೆ ರಸನೇಂದ್ರಿಯ ಅನ್ನುವರು.

೪೯೯ ಪ್ರ.—ಘ್ರಾಣೇಂದ್ರಿಯ ಅಂದರೇನು?

ಉ.—ಯಾತರ ದ್ವಾರದಿಂದ ಎರಡು ಪ್ರಕಾರದ ಗಂಧಗಳ ಜ್ಞಾನವಾಗುವದೋ, ಅದಕ್ಕೆ ಘ್ರಾಣೇಂದ್ರಿಯ ಅನ್ನುವರು.

೪೯೦ ಪ್ರ—ಚಕ್ಷುರಿಂದ್ರಿಯ ಅಂದರೇನು?

ಉ.—ಯಾತರ ದ್ವಾರದಿಂದ ಐದು ಪ್ರಕಾರದ ವರ್ಣಗಳ (ಬಣ್ಣಗಳ) ಜ್ಞಾನವಾಗುವದೋ, ಅದಕ್ಕೆ ಚಕ್ಷುರಿಂದ್ರಿಯ ಅನ್ನುವರು.

೪೯೧ ಪ್ರ.—ಶ್ರೋತ್ರೇಂದ್ರಿಯ ಅಂದರೇನು?

ಉ.—ಯಾತರ ದ್ವಾರದಿಂದ ಏಳು ಪ್ರಕಾರದ ಸ್ವರಗಳ ಜ್ಞಾನವಾಗುವದೋ, ಅದಕ್ಕೆ ಶ್ರೋತ್ರೇಂದ್ರಿಯ ಅನ್ನುವರು.

೪೯೨ ಪ್ರ.—ಯಾವ ಯಾವ ಜೀವಿಗಳಿಗೆ ಯಾವ ಯಾವ ಇಂದ್ರಿಯಗಳು ಇರುವವು?

ಉ.—ಪೃಥ್ವಿ, ಅಪ್, ತೇಜ, ವಾಯು ಮತ್ತು ವನಸ್ಪತಿ ಈ ಜೀವಿಗಳಿಗೆ ಸ್ಪರ್ಶೇಂದ್ರಿಯು ಒಂದೇ ಇರುವದು. ಕ್ರಿಮಿ ಮೊದಲಾದ ಜೀವಿಗಳಿಗೆ ಸ್ಪರ್ಶ ಹಾಗು ರಸನ ಹೀಗೆ ಎರಡು ಇಂದ್ರಿಯಗಳು ಇರುವವು. ಇರುವೆ ಮೊದಲಾದ ಜೀವಿಗಳಿಗೆ ಸ್ಪರ್ಶ, ರಸನ, ಘ್ರಾಣಗಳೆಂಬ ಮೂರು ಇಂದ್ರಿಯಗಳು ಇರುವವು. ಭ್ರಮರ, ಮಕ್ಷಿಕಾದಿ ಜೀವಿಗಳಿಗೆ ಶ್ರೋತ್ರೇಂದ್ರಿಯುದ ಹೊರ್ತು ಉಳಿದ ನಾಲ್ಕು ಇಂದ್ರಿಯಗಳು ಇರುವವು. ಕುದುರೆ ಮೊದಲಾದ ಪಶುಗಳಿಗೆ ಮತ್ತು ಮನುಷ್ಯ, ದೇವ, ನಾರಕಿ ಈ ಜೀವಿಗಳಿಗೆ ಐದು ಇಂದ್ರಿಯಗಳು ಇರುವವು.

೪೯೩ ಪ್ರ.—ಕಾಯು ಅಂದರೇನು?

ಉ.—ತ್ರಸಸ್ಥಾವರ ನಾಮಕರ್ಮದ ಉದಯುದಿಂದ ಆತ್ಮಕ್ಕೆ ಯಾವ ಪ್ರದೇಶಸಮೂಹವು ಪ್ರಾಪ್ತವಾಗುವದೋ, ಅದಕ್ಕೆ ಕಾಯು ಎಂದು ಅನ್ನುವರು.

೪೯೪ ಪ್ರ.—ತ್ರಸ ಅಂದರೇನು?

ಉ.—ತ್ರಸನಾಮಕ ನಾಮಕರ್ಮದ ಉದಯುದಿಂದ

ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ ಇವುಗಳಲ್ಲಿ ಜನ್ಮತಕ್ಕೊಳ್ಳುವ ಜೀವಿಗಳಿಗ ತ್ರಸ ಅನ್ನುವರು.

೪೯೫ ಪ್ರ.—ಸ್ಥಾವರ ಅಂದರೇನು?

ಉ.—ಸ್ಥಾವರವೆಂಬ ನಾಮಕರ್ಮದ ಉದಯದಿಂದ ಪೃಥ್ವಿ, ಅಪ್, ತೇಜ, ವಾಯು ಮತ್ತು ವನಸ್ಪತಿಗಳಲ್ಲಿ ಜನ್ಮ ತಕ್ಕೊಳ್ಳುವ ಜೀವಿಗಳಿಗೆ ಸ್ಥಾವರ ಅನ್ನುತ್ತಾರೆ.

೪೯೬ ಪ್ರ.—ಬಾದರ ಎಂದು ಯಾತಕ್ಕೆ ಅನ್ನುವರು?

ಉ.—ಪೃಥ್ವಿಮೊದಲಾದವುಗಳಿಂದ ಯಾವವಕ್ಕೆ ಪ್ರತಿಬಂಧ ವಾಗುವದೋ, ಅಥವಾ ಯಾವವು ಸ್ವತಃ ಇತರ ಪದಾರ್ಥಗಳಿಗೆ ಪ್ರತಿಬಂಧ ಮಾಡುತ್ತವೆಯೋ, ಅಂಥ ಜೀವಿಗಳಿಗೆ ಬಾದರ ಅನ್ನುತ್ತಾರೆ.

೪೯೭ ಪ್ರ.—ಸೂಕ್ಷ್ಮ ಅಂದರೇನು?

ಉ.—ಯಾವದು ಸ್ವತಃ ಪೃಥ್ವಿ ಮೊದಲಾದವುಗಳಿಂದ ಪ್ರತಿ ಬಂಧಿಸಲ್ಪಡುವದಿಲ್ಲ ಮತ್ತು ಉಳಿದವುಗಳಿಗೆ ಪ್ರತಿ ಬಂಧ ಮಾಡುವದಿಲ್ಲ, ಅದಕ್ಕೆ ಸೂಕ್ಷ್ಮ ಅನ್ನುವರು.

೪೯೮ ಪ್ರ.—ವನಸ್ಪತಿಯಲ್ಲಿ ಭೇದಗಳೆಷ್ಟು?

ಉ.—ಎರಡು. ಅವು:—೧ ಪ್ರತ್ಯೇಕ ಮತ್ತು ೨ ಸಾಧಾ ರಣ.

೪೯೯ ಪ್ರ.—ಪ್ರತ್ಯೇಕ ವನಸ್ಪತಿ ಎಂದು ಯಾತಕ್ಕೆ ಅನ್ನುತ್ತಾರೆ?
ಉ.—ಒಂದು ಶರೀರಕ್ಕೆ ಎಲ್ಲಿ ಒಬ್ಬನೇ ಸ್ವಾಮಿ ಇರುವನೋ, ಅದಕ್ಕೆ ಪ್ರತ್ಯೇಕ ವನಸ್ಪತಿ ಅನ್ನುವರು.

೫೦೦ ಪ್ರ.—ಸಾಧಾರಣ ವನಸ್ಪತಿ ಎಂದು ಯಾತಕ್ಕೆ ಅನ್ನುವರು?
ಉ.—ಯಾವ ಜೀವಿಗಳ ಆಹಾರ, ಶ್ವಾಸೋಚ್ಛ್ವಾಸ, ಆಯುಷ್ಯ ಹಾಗು ಶರೀರ ಇವು ಸಾಧಾರಣ ( ಸರಿ ಅಥವಾ ಒಂದು ) ವಾಗಿರುವವೋ, ಅವಕ್ಕೆ ಸಾಧಾರಣ ವನಸ್ಪತಿ ಅನ್ನುವರು.

೫೦೧ ಪ್ರ.—ಪ್ರತ್ಯೇಕ ವನಸ್ಪತಿಯಲ್ಲಿ ಭೇದಗಳೆಷ್ಟು?
ಉ.—ಎರಡು. ಅವು:—೧ ಸಪ್ರತಿಷ್ಠಿತ, ೨ ಅಪ್ರತಿಷ್ಠಿತ.

೫೦೨ ಪ್ರ.—ಸಪ್ರತಿಷ್ಠಿತ ಅಂದರೇನು?
ಉ.—ಯಾವ ಪ್ರತ್ಯೇಕ ವನಸ್ಪತಿಯು ಆಶ್ರಯದಿಂದ ಅನೇಕ ಸಾಧಾರಣ ವನಸ್ಪತಿ ಶರೀರಗಳು ಇರುವವೋ, ಅದಕ್ಕೆ ಸಪ್ರತಿಷ್ಠಿತ ಪ್ರತ್ಯೇಕ ಅನ್ನುವರು.

೫೦೩ ಪ್ರ.—ಅಪ್ರತಿಷ್ಠಿತ ಪ್ರತ್ಯೇಕ ಎಂದು ಯಾತಕ್ಕೆ ಅನ್ನುವರು?
ಉ.—ಯಾವ ಪ್ರತ್ಯೇಕ ವನಸ್ಪತಿಯು ಆಶ್ರಯದಿಂದ ಯಾವ ಸಾಧಾರಣ ವನಸ್ಪತಿ ಸಹ ಇರುವದಿಲ್ಲವೋ, ಅದಕ್ಕೆ ಅಪ್ರತಿಷ್ಠಿತ ಪ್ರತ್ಯೇಕ ಅನ್ನುವರು.

೫೦೪ ಪ್ರ.—ಸಾಧಾರಣ ವನಸ್ಪತಿಯು ಸಪ್ರತಿಷ್ಠಿತ ಪ್ರತ್ಯೇಕ ವನಸ್ಪತಿಯಲ್ಲಿಯೇ ಇರುತ್ತದೆಯೋ, ಅಥವಾ ಬೇರೆ ಎಲ್ಲಿಯಾದರೂ ಇರುತ್ತದೆಯೋ?

ಉ.—ಪೃಥ್ವಿ, ಅಪ್, ತೇಜ, ವಾಯು, ಕೇವಲೀಭಗವಾನ್, ಆಹಾರಕಶರೀರ, ದೇವ ಮತ್ತು ನಾರಕಿ, ಈ ಎಂಟರ ಹೊರತು ಉಳಿದ ಯಾವತ್ತು ಸಂಸಾರಿ ಜೀವಿಗಳ ಶರೀರಗಳು ಸಾಧಾರಣ ಅರ್ಥಾತ್ ನಿಗೋದಾಶ್ರಯವಾಗಿರುತ್ತವೆ.

೫೦೫ ಪ್ರ.—ಸಾಧಾರಣ ವನಸ್ಪತಿಯು (ನಿಗೋದದ) ಭೇದಗಳೆಷ್ಟು?

ಉ.—ಎರಡು. ಅವು:—೧ ನಿತ್ಯನಿಗೋದ, ೨ ಇತರನಿಗೋದ.

೫೦೬ ಪ್ರ.—ನಿತ್ಯನಿಗೋದ ಅಂದರೇನು?

ಉ.—ಯಾವ ಜೀವಿಗೆ ನಿಗೋದದ ಹೊರತು ಬೇರೆ ಪರ್ಯಾಯವು ಎಂದೂ ಪ್ರಾಪ್ತವಾಗಿಲ್ಲ, ಮತ್ತು ಮುಂದಾದರೂ ಪ್ರಾಪ್ತವಾಗುವದಿಲ್ಲ, ಅದಕ್ಕೆ ನಿತ್ಯನಿಗೋದ ಅನ್ನುವರು.

೫೦೭ ಪ್ರ.—ಇತರನಿಗೋದ ಅಂದರೇನು?

ಉ.—ಯಾವದು ನಿಗೋದದೊಳಗಿಂದ ಹೊರಟು ಬೇರೆ

ಪರ್ಯಾಯವನ್ನು ಧಾರಣಮಾಡಿ, ಪುನಃ ನಿಗೋದ ದಲ್ಲಿ ಉತ್ಪನ್ನವಾಗುವದೋ, ಅದಕ್ಕೆ ಇತರನಿಗೋದ ಅನ್ನುವರು.

೫೦೮ ಪ್ರ.—ಬಾದರ ಮತ್ತು ಸೂಕ್ಷ್ಮ ಹೀಗೆ ಯಾವ ಯಾವ ಜೀವಿಗಳುಂಟು?

ಉ.—ಪೃಥ್ವಿ, ಅಪ್, ತೇಜ, ವಾಯು, ನಿತ್ಯನಿಗೋದ, ಹಾಗು ಇತರ ನಿಗೋದ ಇವು ಆರೂ ಬಾದರ ಮತ್ತು ಸೂಕ್ಷ್ಮ ಇವೆರಡೂ ಪ್ರಕಾರದವಿರುವವು. ಉಳಿದವೆಲ್ಲ ಜೀವಿಗಳು ಬಾದರ ಆಗಿರುವವಲ್ಲದೆ ಸೂಕ್ಷ್ಮವಲ್ಲ.

೫೦೯ ಪ್ರ.—ಯೋಗ ಅಂದರೇನು?

ಉ.—ಪುದ್ಗಲವಿಪಾಕಿ ಶರೀರ ಹಾಗೂ ಅಂಗೋಪಾಂಗ ವೆಂಬ ನಾಮಕರ್ಮದ ಉದಯದಿಂದ, ಮತ್ತು ಮನೋವರ್ಗಣಾ, ವಚನವರ್ಗಣಾ, ಕಾಯವರ್ಗಣಾ ಇವುಗಳ ಅವಲಂಬನದಿಂದ, ಕರ್ಮನೋಕರ್ಮ ಗ್ರಹಣಮಾಡುವ ಜೀವಿಯ ಶಕ್ತಿವಿಶೇಷಕ್ಕೆ ಭಾವಯೋಗವೆನ್ನುವರು. ಇದೇ ಭಾವಯೋಗದ ನಿಮಿತ್ತದಿಂದ ಆತ್ಮಪ್ರದೇಶವು ಚಂಚಲವಾದರೆ, ಅದಕ್ಕೆ ದ್ರವ್ಯಯೋಗ ಅನ್ನುವರು.

೪೧೦ ಪ್ರ.—ಯೋಗದಲ್ಲಿ ಭೇದಗಳೆಷ್ಟು?

ಉ.—ಹದಿನೈದು. ಅವು:—ಮನೋಯೋಗ ೪, ವಚನ ಯೋಗ ೪, ಮತ್ತು ಕಾಯಯೋಗ ೭. ಒಟ್ಟಿಗೆ ೧೫.

೫೧೧ ಪ್ರ.—ವೇದ ಅಂದರೇನು?

ಉ.—ನೋಕಷಾಯದ ಉದಯದಿಂದ ಜೀವಿಗಳಿಗೆ ಉತ್ಪನ್ನವಾಗುವ ಮೈಥುನೇಚ್ಛೆಗೆ ಭಾವವೇದ ಅನ್ನುವರು. ಮತ್ತು ನಾಮಕರ್ಮದ ಉದಯದಿಂದ ಜೀವಿಗೆ ಪ್ರಾಪ್ತವಾದ ವಿಶೇಷ ಪ್ರಕಾರದ ಚಿನ್ಹಕ್ಕೆ ದ್ರವ್ಯವೇದ ಅನ್ನುವರು.

೫೧೨ ಪ್ರ.—ವೇದದಲ್ಲಿ ಭೇದಗಳೆಷ್ಟು?

ಉ.—ಮೂರು. ಅವು:—೧ ಸ್ತ್ರೀವೇದ, ೨ ಪುರುಷವೇದ, ೩ ನಪುಂಸಕವೇದ.

೫೧೩ ಪ್ರ.—ಕಷಾಯ ಅಂದರೇನು?

ಉ.—ಯಾವದು ಆತ್ಮದ ಸಮ್ಯಕ್ತ್ವ, ದೇಶಚಾರಿತ್ರ, ಸಕಲ ಚಾರಿತ್ರ ಮತ್ತು ಯಥಾಖ್ಯಾತಚಾರಿತ್ರರೂಪಿ ಪರಿಣಾಮಗಳನ್ನು ಘಾತಮಾಡುವದೋ, ಅದಕ್ಕೆ ಕಷಾಯ ಅನ್ನುವರು.

೫೧೪ ಪ್ರ.—ಕಷಾಯದಲ್ಲಿ ಭೇದಗಳೆಷ್ಟು?

ಉ.—ಹದಿನಾರು. ಅವು:—ಅನಂತಾನುಬಂಧಿ ೪, ಅಪ್ರ

ತ್ಯಾಖ್ಯಾನಾವರಣೀಯ ೪, ಪ್ರತ್ಯಾಖ್ಯಾನಾವರಣೀಯ ೪, ಮತ್ತು ಸಂಜ್ವಲನ ೪.

೫೧೫ ಪ್ರ.—ಜ್ಞಾನಮಾರ್ಗಣದಲ್ಲಿ ಭೇದಗಳೆಷ್ಟು?

ಉ.—ಎಂಟು. ಅವು:—೧ ಮತಿ, ೨ ಶ್ರುತ, ೩ ಅವಧಿ, ೪ ಮನಃಪರ್ಯಯ, ೫ ಕೇವಲ, ೬ ಕುಮತಿ, ೭ ಕುಶ್ರುತ, ೮ ಕುಅವಧಿ.

೫೧೬ ಪ್ರ.—ಸಂಯಮ ಅಂದರೇನು?

ಉ—.ಅಹಿಂಸಾದಿ ಐದು ವ್ರತಗಳನ್ನು ಧಾರಣ ಮಾಡೋಣ, ಈರ್ಯಾಪಥಾದಿ ಐದು ಸಮಿತಿಗಳನ್ನು ಪಾಲಿಸೋಣ, ಕ್ರೋಧಾದಿ ಕಷಾಯಗಳ ನಿಗ್ರಹ ಮಾಡೋಣ, ಮನೋಯೋಗಾದಿ ಮೂರು ಯೋಗಗಳಿಗೆ ಪ್ರತಿಬಂಧಿಸೋಣ, ಸ್ಪರ್ಶನಾದಿ ಪಂಚೇಂದ್ರಿಯಗಳನ್ನು ಗೆಲ್ಲೋಣ, ಇದಕ್ಕೆ ಸಂಯಮ ಅನ್ನುವರು.

೫೧೭ ಪ್ರ.—ಸಂಯಮಮಾರ್ಗಣದಲ್ಲಿ ಭೇದಗಳೆಷ್ಟು?

ಉ.—ಏಳು. ಅವು:—೧ ಸಾಮಾಯಿಕ, ೨ ಛೇದೋಪಸ್ಥಾಪನೆ, ೩ ಪರಿಹಾರವಿಶುದ್ಧಿ, ೪ ಸೂಕ್ಷ್ಮಸಾಂಪರಾಯ, ೫ ಯಥಾಖ್ಯಾತ, ೬ ಸಂಯಮಾಸಂಯಮ, ೭ ಅಸಂಯಮ.

೫೧೮ ಪ್ರ.—ದರ್ಶನಮಾರ್ಗಣದಲ್ಲಿ ಎಷ್ಟು ಭೇದಗಳುಂಟು?

ಉ.—ನಾಲ್ಕು. ಅವು:—೧ ಚಕ್ಷುರ್ದರ್ಶನ, ೨ ಅಚಕ್ಷು ದರ್ಶನ, ೩ ಅವಧಿದರ್ಶನ, ಮತ್ತು ೪ ಕೇವಲದರ್ಶನ.

೫೧೯ ಪ್ರ.—ಲೇಶ್ಯಾಮಾರ್ಗಣದಲ್ಲಿ ಎಷ್ಟು ಭೇದಗಳು?

ಉ.—ಆರು. ಅವು:—೧ ಕೃಷ್ಣ, ೨ ನೀಲ, ೩ ಕಾಪೋತ, ೪ ಪೀತ, ೫ ಪದ್ಮ, ೬ ಶುಕ್ಲ.

೫೨೦ ಪ್ರ.—ಭವ್ಯಮಾರ್ಗಣದಲ್ಲಿ ಭೇದಗಳೆಷ್ಟು?

ಉ.—ಎರಡು. ಅವು: – ೧ ಭವ್ಯ, ೨ ಅಭವ್ಯ.

೫೨೧ ಪ್ರ.—ಸಮ್ಯಕ್ತ್ವ ಅಂದರೇನು?

ಉ.—ತತ್ವಾರ್ಥದಲ್ಲಿಯ ಶ್ರದ್ಧೆಯೇ ಸಮ್ಯಕ್ತ್ವವು.

೫೨೨ ಪ್ರ.—ಸಮ್ಯಕ್ತ್ವ ಮಾರ್ಗಣದಲ್ಲಿ ಭೇದಗಳೆಷ್ಟು?

ಉ.— ಆರು. ಅವು:—೧ ಉಪಶಮಸಮ್ಯಕ್ತ್ವ, ೨ ಕ್ಷಯೋಪಶಮಸಮ್ಯಕ್ತ್ವ, ೩ ಕ್ಷಾಯಿಕಸಮ್ಯಕ್ತ್ವ, ೪ ಸಮ್ಯಗ್ಮಿಥ್ಯಾತ್ವ, ೫ ಸಾಸಾದನ, ೬ ಮಿಥ್ಯಾತ್ವ.

೫೨೩ ಪ್ರ.—ಸಂಜ್ಞಿ ಅಂದರೇನು?

ಉ.—ಯಾತರಲ್ಲಿ ಸಂಜ್ಞೆಯಿರುವದೋ, ಅದಕ್ಕೆ ಸಂಜ್ಞಿ ಅನ್ನುವರು.

೫೨೪ ಪ್ರ.—ಸಂಜ್ಞಾ ಅಂದರೇನು?

ಉ.—ದ್ರವ್ಯಮನದ ಮಾರ್ಗವಾಗಿ, ಶಿಕ್ಷೆ, ಹುಕುಮು ಮೊದಲಾದವುಗಳನ್ನು ಗ್ರಹಣ ಮಾಡುವದಕ್ಕೆ ಸಂಜ್ಞಾ ಅನ್ನುವರು.

೫೩೫ ಪ್ರ.—ಸಂಜ್ಞಾಮಾರ್ಗಣದಲ್ಲಿ ಎಷ್ಟು ಭೇದಗಳು?

ಉ.—ಎರಡು. ಅವು:—೧ ಸಂಜ್ಞಿ, ೨ ಅಸಂಜ್ಞಿ.

೫೩೬ ಪ್ರ.—ಆಹಾರ ಅಂದರೇನು?

ಉ.—ಔದಾರಿಕಾದಿ ಶರೀರ ಹಾಗು ಪರ್ಯಾಪ್ತಿ ಇವುಗಳಿಗೆ ಯೋಗ್ಯವಾದ ಪುದ್ಗಲ ಗ್ರಹಣಮಾಡುವದೇ ಆಹಾರವೆನಿಸುವದು.

೫೩೭ ಪ್ರ.—ಆಹಾರಮಾರ್ಗಣದಲ್ಲಿ ಭೇದಗಳೆಷ್ಟು?

ಉ.—ಎರಡು. ಅವು:—೧ ಆಹಾರಕ, ೨ ಅನಾಹಾರಕ.

೫೩೮ ಪ್ರ.—ಜೀವವು ಯಾವ ಯಾವ ಅವಸ್ಥೆಯಲ್ಲಿ ಅನಾಹಾರಕವಾಗಿರುತ್ತದೆ?

ಉ.—ವಿಗ್ರಹಗತಿಯಲ್ಲಿ, ಒಂದಾನೊಂದು ಸಮುದ್ಘಾತದ ಕಾಲಕ್ಕೆ ಮತ್ತು ಅಯೋಗಕೇವಲಿಯ ಅವಸ್ಥೆಯಲ್ಲಿ ಜೀವವು ಅನಾಹಾರಕವಾಗಿರುತ್ತದೆ.

೫೩೯ ಪ್ರ.—ವಿಗ್ರಹಗತಿ ಅಂದರೇನು?

ಉ.—ಒಂದು ಶರೀರವನ್ನು ಬಿಟ್ಟು, ಎರಡನೆಯ ಶರೀರವನ್ನು ಧಾರಣಮಾಡುವದಕ್ಕಾಗಿ ಗಮನಮಾಡುವ

ದಕ್ಕೆ ವಿಗ್ರಹಗತಿ ಅನ್ನುವರು.

೫೩೦ ಪ್ರ.—ವಿಗ್ರಹಗತಿಯಲ್ಲಿ ಯಾವ ಯೋಗ ಇರುತ್ತದೆ?

ಉ.—ವಿಗ್ರಹಗತಿಯಲ್ಲಿ ಕಾರ್ಮಾಣಯೋಗ ಇರುತ್ತದೆ.

೫೩೧ ಪ್ರ.—ವಿಗ್ರಹಗತಿಯಲ್ಲಿ ಭೇದಗಳೆಷ್ಟು?

ಉ.—ನಾಲ್ಕು. ಅವು:—೧ ಋಜುಗತಿ, ೨ ಪಾಣಿಮುಕ್ತಾ ಗತಿ, ೩ ಲಾಂಗಲಿಕಾಗತಿ ಮತ್ತು ೪ ಗೋಮೂತ್ರಿಕಾಗತಿ.

೫೩೨ ಪ್ರ.—ಈ ವಿಗ್ರಹಗತಿಯಲ್ಲಿ ಎಷ್ಟೆಷ್ಟು ಕಾಲ ಹತ್ತುತ್ತದೆ?

ಉ.—ಋಜುಗತಿಯಲ್ಲಿ ಒಂದು ಸಮಯ, ಪಾಣಿಮುಕ್ತಾ ಗತಿಯಲ್ಲಿ ಎರಡು ಸಮಯ, ಲಾಂಗಲಿಕಾಗತಿಯಲ್ಲಿ ಮೂರು ಸಮಯ ಮತ್ತು ಗೋಮೂತ್ರಿಕಾಗತಿಯಲ್ಲಿ ನಾಲ್ಕು ಸಮಯಗಳು ಹತ್ತುತ್ತವೆ.

೫೩೩ ಪ್ರ.—ವಿಗ್ರಹಗತಿಯಲ್ಲಿ ಅನಾಹಾರಕ ಅವಸ್ಥೆಯು ಎಷ್ಟು ಸಮಯಗಳವರೆಗೆ ಉಳಿಯುತ್ತದೆ?

ಉ.—ಋಜುಗತಿಯುಳ್ಳ ಜೀವವು ಅನಾಹಾರಕವಾಗಿರಲು ಶಕ್ತವಿಲ್ಲ. ಪಾಣಿಮುಕ್ತಾಗತಿಯಲ್ಲಿ ಒಂದು ಸಮಯ ಅನಾಹಾರಕ, ಲಾಂಗಲಿಕೆಯಲ್ಲಿ ಎರಡು ಸಮಯ, ಮತ್ತು ಗೋಮೂತ್ರಿಕೆಯಲ್ಲಿ ಮೂರುಸಮಯ ಜೀವವು ಅನಾಹಾರಕವಾಗಿರುತ್ತದೆ.

೫೩೪ ಪ್ರ.—ಮೋಕ್ಷಕ್ಕೆ ಹೋಗುವ ಜೀವಕ್ಕೆ ಯಾವಗತಿ ಇರುತ್ತದೆ?

ಉ.—ಋಜುಗತಿ ಇರುತ್ತದೆ, ಮತ್ತು ಆ ಜೀವವು ಅನಾಹಾರಕವೇ ಇರುತ್ತದೆ.

೫೩೫ ಪ್ರ.—ಜನ್ಮವು ಎಷ್ಟು ಪ್ರಕಾರದಿಂದ ಆಗುತ್ತದೆ?

ಉ.—ಮೂರು ಪ್ರಕಾರದಿಂದ ಆಗುತ್ತದೆ. ಅವು:—೧ ಉಪಪಾದಜನ್ಮ, ೨ ಗರ್ಭಜನ್ಮ, ಮತ್ತು ೩ ಸಮ್ಮೂರ್ಛನಜನ್ಮ.

೫೩೬ ಪ್ರ. –ಉಪಪಾದಜನ್ಮ ಎಂದು ಯಾತಕ್ಕೆ ಅನ್ನುವರು?

ಉ.—ಯಾವ ಜೀವವು, ದೇವಜೀವಿಗಳ ಉಪಪಾದಶಯ್ಯದ ಮೇಲೆ ಮತ್ತು ನಾರಕಿಜೀವಿಗಳ ಜನ್ಮಸ್ಥಾನದಲ್ಲಿ ಮುಟ್ಟಿದ ಕೂಡಲೇ ಅಂತರ್ಮುಹೂರ್ತದಲ್ಲಿ ತರುಣಾವಸ್ಥೆಗೆ ಪ್ರಾಪ್ತವಾಗುತ್ತದೆ, ಅದಕ್ಕೆ ಉಪಪಾದಜನ್ಮ ಅನ್ನುವರು.

೫೩೭ ಪ್ರ.—ಗರ್ಭಜನ್ಮ ಅಂದರೇನು?

ಉ.—ತಾಯಿತಂದೆಗಳ ರಕ್ತವೀರ್ಯದಿಂದ ಯಾವ ಶರೀರವುಂಟಾಗುತ್ತದೆಯೋ, ಅದಕ್ಕೆ ಗರ್ಭಜನ್ಮ ಅನ್ನುವರು.

೫೩೮ ಪ್ರ.—ಸಮ್ಮೂರ್ಛನಜನ್ಮ ಅಂದರೇನು?

ಉ.—ತಾಯಿತಂದೆಗಳ ಅಪೇಕ್ಷೆಯನ್ನು ಮಾಡದೆ, ಸುತ್ತು ಮುತ್ತಿನ ಪರಮಾಣುಗಳಿಂದ ಶರೀರರೂಪವು ಉಂಟಾಗುತ್ತದೆ, ಅದಕ್ಕೆ ಸಮ್ಮೂರ್ಛನಜನ್ಮ ಅನ್ನುವರು.

೩೪೯ ಪ್ರ.—ಯಾವ ಯಾವ ಜೀವಿಗಳಿಗೆ ಯಾವ ಯಾವ ಜನ್ಮಗಳು ಆಗುತ್ತವೆ?

ಉ.—ದೇವನಾರಕೀಯು ಜೀವಿಗಳಿಗೆ ಉಪಪಾದಜನ್ಮ ಆಗುತ್ತದೆ; ಜರಾಯುಜ, ಅಂಡಜ, ಪೋತಜ (ಯಾವು ಜನ್ಮಿಸಿದ ಕೂಡಲೇ ಓಡಾಡುತ್ತವೆ, ಮತ್ತು ಶರೀರದ ಮೇಲೆ ಆವರಣ ಮುಂತಾದ್ದೇನೂ ಇರುವದಿಲ್ಲ) ಈ ಜೀವಿಗಳಿಗೆ ಗರ್ಭಜನ್ಮ ಆಗುತ್ತದೆ; ಮತ್ತು ಉಳಿದ ಜೀವಿಗಳಿಗೆ ಸಮ್ಮೂರ್ಛನ ಜನ್ಮ ಆಗುತ್ತದೆ.

೩೫೦ ಪ್ರ—ಯಾವ ಯಾವ ಜೀವಿಗಳಗೆ ಯಾವ ಯಾವ ಲಿಂಗ ಪ್ರಾಪ್ತಿಯಾಗುತ್ತದೆ?

ಉ.—ನಾರಕಿ ಮತ್ತು ಸಮ್ಮೂರ್ಛನ ಜೀವಿಗಳಿಗೆ ನಪುಂಸಕಲಿಂಗ, ದೇವಜೀವಿಗಳಿಗೆ ಪುಲ್ಲಿಂಗ ಮತ್ತು ಸ್ತ್ರೀಲಿಂಗ, ಮತ್ತು ಉಳಿದ ಜೀವಿಗಳಿಗೆ ಮೂರು ಲಿಂಗಗಳು ಇರುತ್ತವೆ.

೫೪೧ ಪ್ರ.—ಜೀವಸಮಾಸ ಅಂದರೇನು?

ಉ.—ಜೀವಿಗಳು ಇರುವ ಸ್ಥಳಕ್ಕೆ ( ಸ್ಥಾನಕ್ಕೆ ) ಜೀವಸಮಾಸ ಅನ್ನುವರು.

೫೪೨ ಪ್ರ.—ಜೀವಸಮಾಸದಲ್ಲಿ ಎಷ್ಟು ಭೇದಗಳುಂಟು?

ಉ.—ತೊಂಬತ್ತೆಂಟು. ಅವು:—ತಿರ್ಯಂಚಿಯವು ೮೫, ಮನುಷ್ಯರವು ೯, ನಾರಕಿಯವು ೨ ಮತ್ತು ದೇವ ಜೀವಿಗಳವು ೨, ಹೀಗೆ ೯೮.

೫೪೩ ಪ್ರ.—ತಿರ್ಯಂಚಿಯವು ೮೫ ಭೇದ ಯಾವವು?

ಉ.—ಸಮ್ಮೂರ್ಛನದಲ್ಲಿ ೬೯, ಮತ್ತು ಗರ್ಭಜದಲ್ಲಿ ೧೬ ಒಟ್ಟಿಗೆ ೮೫.

೫೪೪ ಪ್ರ.—ಸಮ್ಮೂರ್ಛನದಲ್ಲಿ ೬೯ ಯಾವವು?

ಉ.—ಏಕೇಂದ್ರಿಯವು ೪೨, ವಿಕಲತ್ರಯ ೯, ಪಂಚೇಂದ್ರಿಯವು ೧೮ ಹೀಗೆ ೬೯.

೫೪೫ ಪ್ರ—ಏಕೇಂದ್ರಿಯದಲ್ಲಿ ೪೨ ಯಾವವು?

ಉ.—ಪೃಥ್ವಿ, ಅಪ್, ತೇಜ, ವಾಯು, ನಿತ್ಯನಿಗೋದ ಇತರ ನಿಗೋದ. ಈ ಆರರಲ್ಲಿ ಬಾದರ ಮತ್ತು ಸೂಕ್ಷ್ಮ ಭೇದದಿಂದ ೧೨; ಇವುಗಳಲ್ಲಿ ಸಪ್ರತಿಷ್ಠಿತ ಮತ್ತು ಅಪ್ರತಿಷ್ಠಿತ ಇವೆರಡು ಕೂಡಿ ಒಟ್ಟಿಗೆ ೧೪; ಈ

ಹದಿನಾಲ್ಕಕ್ಕೆ ಪರ್ಯಾಪ್ತಕ, ನಿರ್ವೃತ್ಯಪರ್ಯಾಪ್ತಕ ಮತ್ತು ಲಬ್ಧ್ಯಪರ್ಯಾಪ್ತಕ ಈ ಮೂರು ಭೇದಗಳಿಂದ ಗುಣಿಸಲಾಗಿ ಏಕೇಂದ್ರಿಯಗಳ ಜೀವಸಮಾಸಗಳು ೪೨ ಆಗುವವು.

೫೪೬ ಪ್ರ.—ವಿಕಲತ್ರಯದಲ್ಲಿಯ ಒಂಬತ್ತು ಭೇದಗಳು ಯಾವವು?

ಉ.—ದ್ವೀಂದ್ರಿಯ, ತ್ರೀಂದ್ರಿಯ ಮತ್ತು ಚತುರಿಂದ್ರಿಯ ಇವುಗಳಲ್ಲಿ ಪರ್ಯಾಪ್ತಕ, ನಿರ್ವೃತ್ಯಪರ್ಯಾಪ್ತಕ, ಲಬ್ಧ್ಯಪರ್ಯಾಪ್ತಕ ಈ ಮೂರುಗಳ ಅಪೇಕ್ಷೆಯಿಂದ ಒಂಬತ್ತು ಆಗುವವು.

೫೪೭ ಪ್ರ.—ಸಮ್ಮೂರ್ಛನಪಂಚೇಂದ್ರಿಯ ಹದಿನೆಂಟು ಭೇದಗಳು ಯಾವವು?

ಉ.—ಜಲಚರ, ಸ್ಥಲಚರ, ನಭಚರ ಈ ಮೂರರಲ್ಲಿ ಸೈನೀ ಹಾಗು ಅಸೈನೀಗಳ ಅಪೇಕ್ಷೆಯಿಂದ ಆರು ಭೇದ, ಹಾಗು ಈ ಆರರಲ್ಲಿ ಪರ್ಯಾಪ್ತಕ, ನಿರ್ವೃತ್ಯಪರ್ಯಾಪ್ತಕ, ಲಬ್ಧ್ಯಪರ್ಯಾಪ್ತಕ ಈ ಮೂರರ ಅಪೇಕ್ಷೆಯಿಂದ ಹದಿನೆಂಟು ಜೀವಸಮಾಸಗಳಾಗುತ್ತವೆ.

೫೪೮ ಪ್ರ.—ಗರ್ಭಜ ಪಂಚೇಂದ್ರಿಯಗಳ ಹದಿನಾರು ಭೇದಗಳು ಯಾವವು?

ಉ.—ಕರ್ಮಭೂಮಿಯುವ್ರ ಹನ್ನೆರಡು, ಮತ್ತು ಭೋಗ ಭೂಮಿಯುವ್ರ ನಾಲ್ಕು ಹೀಗೆ ಹದಿನಾರು ಭೇದಗಳು.

೫೪೯ ಪ್ರ—ಕರ್ಮಭೂಮಿಯು ಹನ್ನೆರಡು ಭೇದಗಳು ಯಾವವು?

ಉ.—ಜಲಚರ, ಸ್ಥಲಚರ, ನಭಚರ ಈ ಮೂರರಲ್ಲಿ ಸೈನೀ, ಅಸೈನೀ ಭೇದಗಳಿಂದ ಆರು, ಮತ್ತು ಈ ಆರರಲ್ಲಿ ಪರ್ಯಾಪ್ತಕ, ನಿರ್ವೃತ್ತ್ಯಪರ್ಯಾಪ್ತಕ, ಲಬ್ಧ್ಯ ಪರ್ಯಾಪ್ತಕ ಇವುಗಳ ಅಪೇಕ್ಷೆಯಿಂದ ಹನ್ನೆರಡು ಭೇದಗಳಾಗುತ್ತವೆ.

೫೫೦ ಪ್ರ.—ಭೋಗಭೂಮಿಯು ನಾಲ್ಕು ಭೇದಗಳು ಯಾವವು?

ಉ.—ಸ್ಥಲಚರ ಮತ್ತು ನಭಚರ ಇವುಗಳಲ್ಲಿ ಪರ್ಯಾಪ್ತಕ ಮತ್ತು ನಿರ್ವೃತ್ತ್ಯಪರ್ಯಾಪ್ತಕಗಳ ಅಪೇಕ್ಷೆಯಿಂದ ನಾಲ್ಕು ಭೇದಗಳು ಆಗಿವೆ. ಭೋಗಭೂಮಿಯಲ್ಲಿ ಅಸಂಜ್ಞೀ ತಿರ್ಯಂಚಗಳು ಉತ್ಪನ್ನವಾಗುವದಿಲ್ಲ

೫೫೧ ಪ್ರ.—ಮನುಷ್ಯರಲ್ಲಿಯು ಒಂಬತ್ತು ಭೇದಗಳು ಯಾವವು?

ಉ.—ಆರ್ಯಖಂಡ, ಮ್ಲೇಂಛಖಂಡ, ಭೋಗಭೂಮಿ, ಮತ್ತು ಕುಭೋಗಭೂಮಿ ಈ ನಾಲ್ಕು ಗರ್ಭಜಗಳಲ್ಲಿ, ಪರ್ಯಾಪ್ತಕ ಹಾಗು ನಿರ್ವೃತ್ತ್ಯಪರ್ಯಾಪ್ತಕಗಳ ಅಪೇಕ್ಷೆಯಿಂದ ಎಂಟು ಭೇದಗಳು ಆಗುತ್ತವೆ. ಇವು

ಗಳಲ್ಲಿ ಸಮ್ಮೂರ್ಛನ ಮನುಷ್ಯನ ಲಬ್ಧ್ಯಪರ್ಯಾಪ್ತಕ ಎಂಬದೊಂದು ಭೇದವನ್ನು ಕೂಡಿಸುವದರಿಂದ ಒಂಬತ್ತು ಭೇದಗಳಾಗುತ್ತವೆ.

೫೫೨ ಪ್ರ.—ನಾರಕೀಯಗಳಲ್ಲಿ ಎರಡು ಭೇದಗಳು ಯಾವವು?

ಉ.—ಪರ್ಯಾಪ್ತಕ ಮತ್ತು ನಿರ್ವೃತ್ಯಪರ್ಯಾಪ್ತಕ.

೫೫೩ ಪ್ರ.—ದೇವಜೀವಿಗಳ ಎರಡು ಭೇದಗಳು ಯಾವವು?

ಉ.—ಪರ್ಯಾಪ್ತಕ ಮತ್ತು ನಿರ್ವೃತ್ಯಪರ್ಯಾಪ್ತಕ.

೫೫೪ ಪ್ರ.—ದೇವಜೀವಿಗಳ ವಿಶೇಷಭೇದಗಳು ಯಾವಯಾವವು?

ಉ.—ನಾಲ್ಕು. ಅವು:—ಭವನವಾಸಿ, ವ್ಯಂತರ, ಜ್ಯೋತಿಷ್ಕ, ಮತ್ತು ವೈಮಾನಿಕ.

೫೫೫ ಪ್ರ.—ಭವನವಾಸಿ ದೇವ ಎಷ್ಟು?

ಉ.—ಹತ್ತು. ೧ ಅಸುರಕುಮಾರ, ೨ ನಾಗಕುಮಾರ, ೩ ವಿದ್ಯುತ್ಕುಮಾರ, ೪ ಸುಪರ್ಣಕುಮಾರ, ೫ ಅಗ್ನಿಕುಮಾರ, ೬ ವಾತಕುಮಾರ, ೭ ಸ್ತನಿತಕುಮಾರ, ೮ ಉದಧಿಕುಮಾರ, ೯ ದ್ವೀಪಕುಮಾರ ಮತ್ತು ೧೦ ದಿಕ್ಕುಮಾರ.

೫೫೬ ಪ್ರ.—ವ್ಯಂತರರಲ್ಲಿ ಭೇದಗಳೆಷ್ಟು?

ಉ.—ಎಂಟು. ೧ ಕಿನ್ನರ, ೨ ಕಿಂಪುರುಷ, ೩ ಮಹೋ

ರಗ, ೪ ಗಂಧರ್ವ, ೫ ಯಕ್ಷ, ೬ ರಾಕ್ಷಸ, ೭ ಭೂತ, ಮತ್ತು ೮ ಪಿಶಾಚ.

೫೫೭ ಪ್ರ.—ಜ್ಯೋತಿಷ್ಕದೇವ ಜೀವಿಗಳಲ್ಲಿ ಭೇದಗಳೆಷ್ಟು?

ಉ.--ಐದು. ೧ ಸೂರ್ಯ, ೨ ಚಂದ್ರ, ೩ ಗ್ರಹ, ೪ ನಕ್ಷತ್ರ, ೫ ತಾರಕಾ.

೫೫೮ ಪ್ರ.—ವೈಮಾನಿಕ ದೇವಜೀವಿಗಳಲ್ಲಿ ಎಷ್ಟು ಭೇದಗಳು?

ಉ.—ಎರಡು. ೧ ಕಲ್ಪೋಪಪನ್ನ, ೨ ಕಲ್ಪಾತೀತ.

೫೫೯ ಪ್ರ.—ಕಲ್ಪೋಪಪನ್ನ ಅಂದರೇನು?

ಉ.—ಯಾವ ಸ್ಥಳದಲ್ಲಿ ಇಂದ್ರಾದಿಗಳ ಕಲ್ಪನೆ ಇರುವದೋ, ಅದಕ್ಕೆ ಕಲ್ಪೋಪಪನ್ನ ಅನ್ನುವರು.

೫೬೦ ಪ್ರ.—ಕಲ್ಪಾತೀತ ಅಂದರೇನು?

ಉ.—ಯಾವ ಸ್ಥಳದಲ್ಲಿ ಇಂದ್ರಾದಿಗಳ ಕಲ್ಪನೆ ಇಲ್ಲವೋ, ಅದಕ್ಕೆ ಕಲ್ಪಾತೀತ ಅನ್ನುವರು.

೫೬೧ ಪ್ರ.—ಕಲ್ಪೋಪಪನ್ನ ದೇವರಲ್ಲಿ ಎಷ್ಟು ಭೇದಗಳು?

ಉ.—ಹದಿನಾರು:—೧ ಸೌಧರ್ಮ, ೨ ಐಶಾನ, ೩ ಸಾನತ್ಕುಮಾರ, ೪ ಮಾಹೇಂದ್ರ, ೫ ಬ್ರಹ್ಮ, ೬ ಬ್ರಹ್ಮೋತ್ತರ, ೭ ಲಾಂತವ, ೮ ಕಾಪಿಷ್ಠ, ೯ ಶುಕ್ರ ೧೦ ಮಹಾಶುಕ್ರ, ೧೧ ಶತಾರ, ೧೨ ಸಹಸ್ರಾರ ೧೩ ಆನ

ತ, ೧೪ ಪ್ರಾಣತ, ೧೫ ಆರಣ ಮತ್ತು ೧೬ ಅಚ್ಯುತ.

೫೬೨ ಪ್ರ.—ಕಲ್ಪಾತೀತ ದೇವರಲ್ಲಿ ಎಷ್ಟು ಭೇದಗಳು?

ಉ.—ಇಪ್ಪತ್ತು ಮೂರು. ೯ ಗ್ರೈವೇಯಕ, ೯ ಅನುದಿಶ, ೫ ಪಂಚೋತ್ತರ (ವಿಜಯ, ವೈಜಯಂತ, ಜಯಂತ, ಅಪರಾಜಿತ, ಮತ್ತು ಸರ್ವಾರ್ಥಸಿದ್ಧಿ.)

೫೬೩ ಪ್ರ.—ನಾರಕೀಯ ವಿಶೇಷ ಭೇದಗಳು ಯಾವಯಾವು?

ಉ.—ಪೃಥ್ವಿಯ ಅಪೇಕ್ಷೆಯಿಂದ ಏಳು ಭೇದಗಳಿರುವವು.

೫೬೪ ಪ್ರ.—ಏಳು ಪೃಥ್ವಿಗಳ ಹೆಸರೇನು?

ಉ.—೧ ರತ್ನಪ್ರಭಾ (ಘರ್ಮಾ), ೨ ಶರ್ಕರಾಪ್ರಭಾ (ವಂಶಾ), ೩ ವಾಲುಕಾಪ್ರಭಾ (ಮೇಘ) ೪ ಪಂಕಪ್ರಭಾ (ಅಂಜನಾ), ೫ ಧೂಮಪ್ರಭಾ (ಅರಿಷ್ಟಾ), ೬ ತಮಪ್ರಭಾ (ಮಘವೀ), ೭ ಮಹಾತಮಪ್ರಭಾ (ಮಾಘವೀ).

೫೬೫ ಪ್ರ.—ಸೂಕ್ಷ್ಮ ಏಕೇಂದ್ರಿ ಜೀವಿಗಳಿರುವ ಸ್ಥಾನ ಯಾವದು?

ಉ.—ಸರ್ವಲೋಕವು.

೫೬೬ ಪ್ರ.—ಬಾದರ ಏಕೇಂದ್ರಿಯ ಜೀವಿಗಳು ಎಲ್ಲಿರುತ್ತವೆ?

ಉ.—ಬಾದರ ಏಕೇಂದ್ರಿಯ ಜೀವಿಗಳು ಯಾವದಾದರೂ ಆಧಾರದ ನಿಮಿತ್ತದಿಂದ ಇರುತ್ತವೆ.

೫೬೭ ಪ್ರ.—ತ್ರಸಜೀವಿಗಳು ಎಲ್ಲಿರುತ್ತವೆ?

ಉ.—ತ್ರಸಜೀವಿಗಳು ತ್ರಸನಲಿಕೆಯಲ್ಲಿರುವವು.

೫೬೮ ಪ್ರ.—ವಿಕಲತ್ರಯಗಳು ಎಲ್ಲಿರುವವು?

ಉ.—ವಿಕಲತ್ರಯ ಜೀವಿಗಳು ಕರ್ಮಭೂಮಿಯಲ್ಲಿ, ಕಟ್ಟ ಕಡೆಯ ಪುಷ್ಕರಾರ್ಧದ್ವೀಪದಲ್ಲಿ ಹಾಗು ಕಡೆಯ ಸ್ವಯಂಭೂರಮಣ ಸಮುದ್ರದಲ್ಲಿ ಇರುತ್ತವೆ.

೫೬೯ ಪ್ರ.—ಪಂಚೇಂದ್ರಿಯ ತಿರ್ಯಂಚ ಎಲ್ಲೆಲ್ಲಿ ಇರುತ್ತವೆ?

ಉ.—ಮಧ್ಯಲೋಕದಲ್ಲಿ ಇರುತ್ತವೆ. ಆದರೆ ಜಲಚರ ತಿರ್ಯಂಚಗಳು ಲವಣಸಮುದ್ರ, ಕಾಲೋದಧಿ ಸಮುದ್ರ, ಮತ್ತು ಸ್ವಯಂಭೂರಮಣಸಮುದ್ರ ಇವುಗಳ ಹೊರ್ತು ಬೇರೆ ಸ್ಥಳಗಳಲ್ಲಿ ಇರುವದಿಲ್ಲ.

೫೭೦ ಪ್ರ.—ನಾರಕೀಜೀವಿಗಳು ಎಲ್ಲಿರುತ್ತವೆ?

ಉ.—ಅಧೋಲೋಕದ ಏಳು ಪೃಥ್ವಿಗಳಲ್ಲಿ (ನರಕಗಳಲ್ಲಿ) ಇರುತ್ತವೆ.

೫೭೧ ಪ್ರ.— ಭವನವಾಸಿ ಮತ್ತು ವ್ಯಂತರದೇವಜೀವಿಗಳು ಎಲ್ಲಿರುತ್ತವೆ?

ಉ.—ಮೊದಲನೆಯ ಪೃಥ್ವಿಯ ಖರಭಾಗ, ಪಂಕಭಾಗ, ಹಾಗು ತಿರ್ಯಕ್‌ಲೋಕ ಇವುಗಳಲ್ಲಿರುವವು.

೫೭೨ ಪ್ರ.—ಜ್ಯೋತಿಷವಾಸೀ ದೇವಜೀವಿಗಳು ಎಲ್ಲಿರುವವು?

ಉ.—ಪೃಥ್ವಿಯಿಂದ ೭೯೦ ಯೋಜನಗಳ ಮೇಲೆ, ೯೦೦ ಯೋಜನ ಎತ್ತರದ ವರೆಗೆ, ಅಂದರೆ ೧೧೦ ಯೋಜನ ಆಕಾಶದ ಪೊಳ್ಳಿನಲ್ಲಿ ಒಂದು ರಾಜು ಆಗಲ ಮಧ್ಯಲೋಕದಲ್ಲಿ ಇರುವವು.

೫೭೩ ಪ್ರ.—ವೈಮಾನಿಕ ದೇವಜೀವಿಗಳು ಎಲ್ಲಿರುವವು?

ಉ.—ಊರ್ಧ್ವಲೋಕದಲ್ಲಿ.

೫೭೪ ಪ್ರ.—ಮನುಷ್ಯರು ಎಲ್ಲಿರುತ್ತಾರೆ?

ಉ.—ಮನುಷ್ಯಲೋಕದಲ್ಲಿ.

೫೭೫ ಪ್ರ.—ಲೋಕಗಳಲ್ಲಿ ಭೇದಗಳೆಷ್ಟು?

ಉ.—ಮೂರು. ೧ ಊರ್ಧ್ವಲೋಕ, ೨ ಮಧ್ಯಲೋಕ, ೩ ಅಧೋಲೋಕ.

೫೭೬ ಪ್ರ.—ಅಧೋಲೋಕ ಎಂದು ಯಾತಕ್ಕೆ ಅನ್ನುತ್ತಾರೆ?

ಉ.—ಮೇರುಪರ್ವತದ ಕೆಳಗೆ ಏಳು ರಾಜುಗಳ ವರೆಗಿನ ಭಾಗಕ್ಕೆ ಅಧೋಲೋಕ ಅನ್ನುವರು.

೫೭೭ ಪ್ರ.—ಊರ್ಧ್ವಲೋಕ ಎಂದು ಯಾತಕ್ಕೆ ಅನ್ನುವರು?

ಉ.—ಮೇರುಪರ್ವತದ ಮೇಲೆ ಲೋಕದ ಅಂತ್ಯದವರೆಗಿನ ಭಾಗಕ್ಕೆ ಊರ್ಧ್ವಲೋಕವೆನ್ನುವರು.

೫೭೮ ಪ್ರ.—ಮಧ್ಯಲೋಕ ಎಂದು ಯಾತಕ್ಕೆ ಅನ್ನುವರು?

ಉ.—ಒಂದು ಲಕ್ಷ ನಾಲ್ವತ್ತು ಸಾವಿರ ಯೋಜನ ಮೇರು ವಿನ ಎತ್ತರವಿದೆ. ಇಷ್ಟು ಪ್ರಮಾಣದ ಪ್ರದೇಶಕ್ಕೆ ಮಧ್ಯಲೋಕ ಅನ್ನುವರು.

೫೭೯ ಪ್ರ.—ಮಧ್ಯಲೋಕದ ವಿಶೇಷ ಸ್ವರೂಪ ಏನಿರುವದು?

ಉ.—ಮಧ್ಯಲೋಕದ ಅಗದಿ ಮಧ್ಯಭಾಗದಲ್ಲಿ ಒಂದು ಲಕ್ಷ ಯೋಜನ (ಎರಡು ಸಾವಿರ ಹರಿದಾರಿಗೆ ಒಂದು ಯೋಜನ) ಅಗಲು, ಮತ್ತು ಗೋಲ ಹೀಗೆ ಜಂಬೂದ್ವೀಪವಿರುವದು. ಅದರ ಮಧ್ಯಭಾಗದಲ್ಲಿ ಒಂದು ಲಕ್ಷ ಯೋಜನ ಎತ್ತರದ ಮೇರು ಪರ್ವತವಿರುವದು. ಆ ಪರ್ವತದ ಪಾಯಾ ಒಂದು ಸಾವಿರ ಯೋಜನ ಭೂಮಿಯಲ್ಲಿ ತಗ್ಗು ಇರುವದು, ಮತ್ತು ೯೯ ಸಾವಿರ ಯೋಜನ ಭೂಮಿಯ ಮೇಲೆ ಇದ್ದು ಕಡೆಗೆ ನಾಲ್ವತ್ತು ಯೋಜನ ಚೂಲಿಕಾ (ಶಿಖರ) ಇರುವದು. ಜಂಬೂದ್ವೀಪದಲ್ಲಿ ಪೂರ್ವಪಶ್ಚಿಮದಿಕ್ಕಿಗೆ ಉದ್ದಾಗಿ ಆರು ಕುಲಾಚಲಪರ್ವತಗಳು ಹಬ್ಬಿರುವವು, ಇದರಿಂದ ಜಂಬೂದ್ವೀಪದಲ್ಲಿ ಏಳು ಭಾಗಗಳಾಗಿರುವವು. ಅವು:—೧ ಭರತ, ೨ ಹೈಮವತ, ೩ ಹರಿ, ೪ ವಿದೇಹ, ೫ ರಮ್ಯಕ್, ೬ ಹೈರಣ್ಯವತ, ೭ ಐರಾವತ. ವಿದೇಹಕ್ಷೇತ್ರದಲ್ಲಿ

ಮೇರುವಿನ ಉತ್ತರಕ್ಕೆ ಉತ್ತರಕುರು, ಮತ್ತು ದಕ್ಷಿಣಕ್ಕೆ ದೇವಕುರು ಇರುವವು. ಜಂಬೂದ್ವೀಪದ ನಾಲ್ಕೂ ಕಡೆಯಿಂದ ಅಗಳತದಂತೆ ಸುತ್ತುಗಟ್ಟಿದ ಎರಡು ಲಕ್ಷ ಯೋಜನ ಅಗಲಾದ ಲವಣಸಮುದ್ರ ಇರುವದು. ಲವಣಸಮುದ್ರಕ್ಕೆ ನಾಲ್ಕೂ ಕಡೆಯಿಂದ ಸುತ್ತುಗಟ್ಟಿದ ನಾಲ್ಕುಲಕ್ಷ ಯೋಜನ ಅಗಲಾಗಿ ಧಾತಕೀಖಂಡ ದ್ವೀಪವಿರುವದು. ಈ ದ್ವೀಪದಲ್ಲಿ ಎರಡು ಮೇರುಪರ್ವತಗಳಿದ್ದು, ಕ್ಷೇತ್ರವು ಕುಲಾಚಲಾದಿ ಸರ್ವ ಜಂಬೂದ್ವೀಪಕ್ಕಿಂತ ಇಮ್ಮಡಿ ವಿಸ್ತಾರವಿರುವದು. ಧಾತಕೀಖಂಡಕ್ಕೆ ನಾಲ್ಕೂ ಕಡೆಯಿಂದ ಸುತ್ತುಗಟ್ಟಿದ ಎಂಟುಲಕ್ಷ ಯೋಜನ ಅಗಲಾಗಿ ಕಾಲೋದಧಿ ಸಮುದ್ರವಿರುವದು. ಈ ಕಾಲೋದಧಿ ಸಮುದ್ರದ ಸುತ್ತರಿದು ಹದಿನಾರು ಲಕ್ಷ ಯೋಜನ ಅಗಲಿನ ಪುಷ್ಕರದ್ವೀಪವಿರುವದು. ಈ ಪುಷ್ಕರದ್ವೀಪದ ಮಧ್ಯಭಾಗದಲ್ಲಿ ಬಳಿಯು ಆಕಾರದಂತೆ, ಪೃಥ್ವಿ ಮೇಲೆ ಅಂದರೆ ತಳದಲ್ಲಿ ಅಗಲು ಒಂದು ಸಾವಿರ ಇಪ್ಪತ್ತೆರಡು ಯೋಜನ, ಮಧ್ಯಭಾಗದಲ್ಲಿ ಏಳನೂರಾ ಇಪ್ಪತ್ತು ಮೂರು ಯೋಜನ, ಮೇಲೆ ನಾಲ್ಕು ನೂರಾ ಇಪ್ಪತ್ತು

ನಾಲ್ಕು ಯೋಜನ, ಎತ್ತರ ಹದಿನೇಳು ನೂರಾ ಇಪ್ಪತ್ತೊಂದು ಯೋಜನ, ಮತ್ತು ನೆಲದೊಳಗೆ ನಾಲ್ಕುನೂರಾ ಸವ್ವಾಮೂವತ್ತು ಯೋಜನ ಹೀಗೆ ಮಾನುಷೋತ್ತರನಾಮಕ ಪರ್ವತವಿರುವದು. ಇದರಿಂದ ಪುಷ್ಕರ ದ್ವೀಪದಲ್ಲಿ ಎರಡು ಭಾಗಗಳಾಗಿರುವವು. ಪುಷ್ಕರ ದ್ವೀಪದ ಮೊದಲಿನ ಅರ್ಧಭಾಗದಲ್ಲಿ, ಜಂಬೂದ್ವೀಪದ ದುಪ್ಪಟ್ಟು ಅಂದರೆ ಧಾತಕೀ ಖಂಡ ದ್ವೀಪದಷ್ಟು ಸರ್ವ ಪ್ರಕಾರದ ರಚನೆಯಿರುವದು. ಜಂಬೂದ್ವೀಪ, ಧಾತಕೀಖಂಡ, ಪುಷ್ಕರಾರ್ಧದ್ವೀಪ, ಲವಣೋದಧಿಸಮುದ್ರ, ಮತ್ತು ಕಾಲೋದಧಿಸಮುದ್ರ ಇವೆಲ್ಲಕ್ಕೂ ಕೂಡಿ ಮನುಷ್ಯಲೋಕ ಎಂಬ ಸಂಜ್ಞೆಯು. ಪುಷ್ಕರದ್ವೀಪದಿಂದ ಮುಂದೆ ಪರಸ್ಪರವಾಗಿ ಒಂದು ಮತ್ತೊಂದನ್ನು ಸುತ್ತುಗಟ್ಟಿ ಇದ್ದಂಥ, ಇಮ್ಮಡಿ ಇಮ್ಮಡಿ ವಿಸ್ತಾರದ ದ್ವೀಪ ಮತ್ತು ಸಮುದ್ರಗಳು ಮಧ್ಯಲೋಕದ ಕಡೆಯವರೆಗೆ ಇರುವವು. ಐದು ಮೇರುಗಳೊಡನೆ ಸಂಬಂಧವಿಡುವ ಐದು ಭರತ, ಐದು ಐರಾವತ, ದೇವಕುರು ಮತ್ತು ಉತ್ತರಕುರು ಇವುಗಳನ್ನು ಬಿಟ್ಟು ಐದು ವಿದೇಹ, ಈ ಪ್ರಕಾರ ಎಲ್ಲಕೂಡಿ

ಹದಿನೈದು ಕರ್ಮಭೂಮಿಗಳುಂಟು. ಐದು ಹೈಮವತ, ಐದು ಹೈರಣ್ಯಾವತ, ಈ ಕ್ಷೇತ್ರ್ರಗಳಲ್ಲಿ ಜಘನ್ಯ ಭೋಗಭೂಮಿಯುಂಟು. ಐದು ಹರಿ, ಐದು ರಮ್ಯಕ್, ಈ ಹತ್ತು ಕ್ಷೇತ್ರ್ರಗಳಲ್ಲಿ ಮಧ್ಯಮಭೋಗಭೂಮಿಯುಂಟು. ಐದು ದೇವಕುರು, ಐದು ಉತ್ತರಕುರು, ಈ ಹತ್ತು ಕ್ಷೇತ್ರ್ರಗಳಲ್ಲಿ ಉತ್ತಮ ಭೋಗಭೂಮಿಯುಂಟು. ಯಾವ ಸ್ಥಳದಲ್ಲಿ ಅಸಿ, ಮಸಿ, ಕೃಷಿ, ಸೇವಾ, ಶಿಲ್ಪ ಮತ್ತು ವಾಣಿಜ್ಯ, ಈ ಆರು ಕರ್ಮಗಳ ಪ್ರವೃತ್ತಿಯಿರುವದೋ, ಅದಕ್ಕೆ ಕರ್ಮಭೂಮಿ ಅನ್ನುವರು. ಮತ್ತು ಯಾವ ಸ್ಥಳದಲ್ಲಿ ಇವುಗಳ ಪ್ರವೃತ್ತಿ ಇರುವದಿಲ್ಲವೋ, ಅದಕ್ಕೆ ಭೋಗಭೂಮಿ ಅನ್ನುವರು. ಮನುಷ್ಯಕ್ಷೇತ್ರದ ಹೊರಗಿನ ಸರ್ವದ್ವೀಪ ಸಮುದ್ರಗಳಲ್ಲಿ ಜಘನ್ಯಭೋಗಭೂಮಿಯಂತೆ ರಚನೆಯಿರುವದು. ಆದರೆ ಅಂತಿಮ ಸ್ವಯಂಭೂರಮಣ ದ್ವೀಪದ ಉತ್ತರಾರ್ಧದಲ್ಲಿ, ಸಂಪೂರ್ಣ ಸ್ವಯಂಭೂರಮಣ ಸಮುದ್ರದಲ್ಲಿ ಮತ್ತು ನಾಲ್ಕು ವಿದಿಶೆಗಳ ಕೋನಭಾಗದಲ್ಲಿದ್ದಂಥ ಪೃಥ್ವಿಯಲ್ಲಿ (ಕ್ಷೇತ್ರದಲ್ಲಿ) ಕರ್ಮಭೂಮಿಯಂತೆ ರಚನೆ ಇರುವದು. ಲವಣಸಮುದ್ರ ಮತ್ತು ಕಾಲೋದಧಿ ಸ

ಮುದ್ರ ಇವುಗಳಲ್ಲಿ ೯೬ ಅಂತರ್ದ್ವೀಪ ಇರುವವು, ಅವುಗಳಲ್ಲಿ ಕುಭೋಗಭೂಮಿಯ ಹಾಗೆ ರಚನೆ ಯಿರುವದು. ಆ ಸ್ಥಳದಲ್ಲಿ ಬರೇ ಮನುಷ್ಯರೇ ಇರುತ್ತಾರೆ, ಮತ್ತು ಆ ಮನುಷ್ಯರ ಆಕೃತಿ ಅನೇಕ ಪ್ರಕಾರದ ಕುತ್ಸಿತ ( ಕೆಟ್ಟ ) ಇರುವದು.

---

# ಐದನೆಯ ಅಧ್ಯಾಯ.

೫೮೦ ಪ್ರ.—ಸಂಸಾರದಲ್ಲಿ ಸರ್ವ ಪ್ರಾಣಿಗಳು ಸುಖದ ಇಚ್ಛೆ ಯನ್ನು ಮಾಡುತ್ತವೆ, ಮತ್ತು ಅದನ್ನು ದೊರಕಿಸಿ ಕೊಳ್ಳುವ ಉಪಾಯವನ್ನು ಸಹ ಮಾಡುತ್ತಿರುತ್ತವೆ, ಆದರೆ ಅವಕ್ಕೆ ಸುಖಪ್ರಾಪ್ತಿಯು ಯಾಕೆ ಆಗುವದಿಲ್ಲ?

ಉ.—ಸಂಸಾರಿಜೀವಿಗಳು ಸುಖದ ನಿಜಸ್ವರೂಪವನ್ನೂ, ಅದನ್ನು ಪ್ರಾಪ್ತಮಾಡಿಕೊಳ್ಳುವ ನಿಜವಾದ ಉಪಾಯವನ್ನೂ ತಿಳಿಯುವದಿಲ್ಲ, ಮತ್ತು ನಿಜವಾದ ಉಪಾಯಗಳ ಸಾಧನಗಳನ್ನೂ ಏಕತ್ರಮಾಡುವದಿಲ್ಲ, ಆದ್ದರಿಂದ ನಿಜವಾದ ಸುಖದ ಪ್ರಾಪ್ತಿಯು ಅವಕ್ಕೆ ಆಗುವದಿಲ್ಲ.

೫೮೧ ಪ್ರ.—ನಿಜವಾದ ಸುಖದ ಸ್ವರೂಪ ಯಾವದು?

ಉ.—ಆನಂದಸ್ವರೂಪಿ ಜೀವಿಗಳ ಅನುಜೀವೀಗುಣಕ್ಕೆ ನಿಜವಾದ ಸುಖವೆನ್ನುವರು. ಮತ್ತು ಅದೇ ಜೀವಿಗಳ ಮುಖ್ಯ ಸ್ವಭಾವವು. ಆದರೆ ಸಂಸಾರಿಜೀವಿಗಳು ಭ್ರಾಂತಿವಶವಾಗಿದ್ದರಿಂದ, ಸಾತಾವೇದನೀಯ ಕರ್ಮದ ಉದಯದಿಂದ ಆಗುವ ಆ ನಿಜವಾದ ಸುಖದ ವೈಭಾವಿಕ (ವಿಭಾವರೂಪಿ) ಪರಿಣತಿರೂಪಿ ಸಾತಾಪರಿಣಾಮಕ್ಕೇ ನಿಜವಾದ ಸುಖವೆಂದು ತಿಳಿದಿರುತ್ತವೆ.

೫೮೨ ಪ್ರ.—ಸಂಸಾರಿ ಜೀವಕ್ಕೆ ನಿಜವಾದ ಸುಖಪ್ರಾಪ್ತಿಯು ಯಾಕೆ ಆಗುವದಿಲ್ಲ?

ಉ.—ಕರ್ಮದಿಂದ ಆ ಸುಖವನ್ನು ಘಾತಮಾಡಿಬಿಟ್ಟಿರುವದರಿಂದ, ನಿಜವಾದ ಸುಖವು ಸಿಗುವದಿಲ್ಲ.

೫೮೩ ಪ್ರ.—ಸಂಸಾರಿಜೀವಕ್ಕೆ ನಿಜವಾದ ಸುಖವು ಯಾವಾಗ್ಗೆ ಪ್ರಾಪ್ತವಾಗುತ್ತದೆ?

ಉ.—ಮೋಕ್ಷವಾದ ಮೇಲೆ ನಿಜವಾದ ಸುಖವು ಪ್ರಾಪ್ತವಾಗುತ್ತದೆ.

೫೮೪ ಪ್ರ.—ಮೋಕ್ಷದ ಸ್ವರೂಪವೇನು?

ಉ.—ಆತ್ಮದಿಂದ ಸಂಪೂರ್ಣ ಕರ್ಮದ ವಿಪ್ರಮೋಕ್ಷ (ಅತ್ಯಂತವಿಯೋಗ) ಆಗುವದೇ ಮೋಕ್ಷವು.

೫೮೫ ಪ್ರ.—ಆ ಮೋಕ್ಷವು ಯಾವ ಉಪಾಯದಿಂದ ಪ್ರಾಪ್ತವಾಗುತ್ತದೆ?

ಉ.—ಸಂವರ ಮತ್ತು ನಿರ್ಜರಾ ಇವುಗಳಿಂದ ಪ್ರಾಪ್ತವಾಗುತ್ತದೆ.

೫೮೬ ಪ್ರ.—ಸಂವರ ಅಂದರೇನು?

ಉ.—ಅಸ್ರವದ ನಿರೋಧಮಾಡೋಣ, ಅಂದರೆ ಅನಾಗತ (ಹೊಸ) ಕರ್ಮದ ಸಂಬಂಧವು ಆತ್ಮಕ್ಕೆ ಆಗದೆ ಇರೋಣ, ಇದಕ್ಕೆ ಸಂವರ ಅನ್ನುವರು.

೫೮೭ ಪ್ರ.—ನಿರ್ಜರಾ ಅಂದರೇನು?

ಉ.—ಮೊದಲು ಬಂಧಿಸಲ್ಪಟ್ಟ ಕರ್ಮದ ಸಂಬಂಧವು ಆತ್ಮಕ್ಕೆ ಇಲ್ಲದಂತೆ ಆಗುವದೇ ನಿರ್ಜರಾ ಎನಿಸುವದು.

೫೮೮ ಪ್ರ.—ಸಂವರ ಮತ್ತು ನಿರ್ಜರಾ ಆಗುವ ಉಪಾಯ ಯಾವದು?

ಉ.—ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಮತ್ತು ಸಮ್ಯಗ್ ಚಾರಿತ್ರ ಈ ಮೂರು ಗುಣಗಳ ಏಕತ್ವವಾಗೋಣವೇ ಸಂವರ ಮತ್ತು ನಿರ್ಜರ ಆಗುವ ಉಪಾಯವು.

೫೮೯ ಪ್ರ.—ಈ ಮೂರು ಪೂರ್ಣ ಗುಣಗಳ ಐಕ್ಯವು ಯುಗಪತ್ (ಒಂದೇಕಾಲಕ್ಕೆ) ಆಗುವದೋ ಅಥವಾ ಕ್ರಮ

ದಿಂದ ಆಗುವದೋ?

ಉ.—ಮೂರೂ ಗುಣಗಳ ಏಕತ್ವವು ಕ್ರಮದಿಂದ ಆಗುವದು.

೫೯೦ ಪ್ರ.--ಈ ಮೂರು ಪೂರ್ಣಗುಣಗಳ ಐಕ್ಯವಾಗುವ ಕ್ರಮ ಹ್ಯಾಗಿರುವದು?

ಉ.- ಹ್ಯಾಗೆ ಹ್ಯಾಗೆ ಗುಣಸ್ಥಾನಗಳು ಬೆಳೆಯುತ್ತ ಹೋಗುವವೋ, ಹಾಗೆ ಹಾಗೆ ಈ ಗುಣಗಳು ಬೆಳೆಯುತ್ತ ಹೋಗಿ, ಕಟ್ಟಕಡೆಗೆ ಪೂರ್ಣ ಆಗುತ್ತವೆ.

೫೯೧ ಪ್ರ.—ಗುಣಸ್ಥಾನ ಅಂದರೇನು?

ಉ.—ಮೋಹ ಮತ್ತು ಯೋಗ ಇವುಗಳ ನಿಮಿತ್ತದಿಂದ, ಸಮ್ಯಗ್ದರ್ಶನ ಸಮ್ಯಗ್‌ಜ್ಞಾನ ಸಮ್ಯಗ್‌ಚಾರಿತ್ರ ರೂಪಿ ಆತ್ಮದ ಗುಣಗಳ ತಾರತಮ್ಯರೂಪಿ ಅವಸ್ಥೆಗೆ ಗುಣಸ್ಥಾನ ಅನ್ನುವರು.

೫೯೨ ಪ್ರ.—ಗುಣಸ್ಥಾನದಲ್ಲಿ ಎಷ್ಟು ಭೇದಗಳುಂಟು?

ಉ.—ಹದಿನಾಲ್ಕು. ಅವು:—೧ ಮಿಥ್ಯಾತ್ವ, ೨ ಸಾಸಾದನ, ೩ ಮಿಶ್ರ, ೪ ಅವಿರತಸಮ್ಯಗ್‌ದೃಷ್ಟಿ, ೫ ದೇಶವಿರತ, ೬ ಪ್ರಮತ್ತವಿರತ, ೭ ಅಪ್ರಮತ್ತವಿರತ, ೮ ಅಪೂರ್ವಕರಣ, ೯ ಅನಿವೃತ್ತಿಕರಣ, ೧೦ ಸೂಕ್ಷ್ಮಸಾಂಪರಾಯ, ೧೧ ಉಪಶಾಂತಮೋಹ, ೧೨ ಕ್ಷೀಣಮೋ

ಹ, ೧೩ ಸಯೋಗಕೇವಲಿ, ೧೪ ಅಯೋಗಕೇವಲಿ.

೫೯೩ ಪ್ರ.—ಗುಣಸ್ಥಾನಗಳಿಗೆ ಹೀಗೆ ಹೆಸರು ಬೀಳುವದರಲ್ಲಿಯ ಪ್ರಯೋಜನವೇನು?

ಉ.—ಮೋಹನೀಯಕರ್ಮ ಮತ್ತು ಯೋಗ ಇವು ಗುಣಸ್ಥಾನಗಳ ಕಾರಣ ಇರುವವು.

೫೯೪ ಪ್ರ.—ಯಾವ ಯಾವ ಗುಣಸ್ಥಾನಕ್ಕೆ ಯಾವ ಯಾವ ನಿಮಿತ್ತ ಇರುವದು?

ಉ.—ಮೊದಲಿನ ನಾಲ್ಕು ಗುಣಸ್ಥಾನಗಳು ದರ್ಶನಮೋಹನೀಯಕರ್ಮದ ನಿಮಿತ್ತದಿಂದ ಆಗುವವು. ಐದನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದ ವರೆಗಿನ ಎಂಟು ಗುಣಸ್ಥಾನಗಳು ಚಾರಿತ್ರಮೋಹನೀಯಕರ್ಮದ ನಿಮಿತ್ತದಿಂದ ಆಗುತ್ತವೆ. ಹದಿಮೂರನೆಯ ಹಾಗೂ ಹದಿನಾಲ್ಕನೆಯ ಗುಣಸ್ಥಾನಗಳು ಯೋಗದ ನಿಮಿತ್ತದಿಂದ ಆಗುತ್ತವೆ. ಭಾವಾರ್ಥ:—ಮೊದಲನೆಯ ಗುಣಸ್ಥಾನವು ದರ್ಶನಮೋಹನೀಯಕರ್ಮದ ಉದಯದಿಂದ ಆಗುತ್ತದೆ. ಇದರಲ್ಲಿ ಆತ್ಮದ ಪರಿಣಾಮಮಿಥ್ಯಾತ್ವಸ್ವರೂಪದವಿರುತ್ತವೆ. ನಾಲ್ಕನೆಯ ಗುಣಸ್ಥಾನವು ದರ್ಶನಮೋಹನೀ

ಯಕರ್ಮದ ಉಪಶಮ, ಕ್ಷಯ ಅಥವಾ ಕ್ಷಯೋ
ಪಶಮದಿಂದ ಆಗುತ್ತದೆ. ಈ ಗುಣಸ್ಥಾನದಲ್ಲಿ ಆತ್ಮ
ಕ್ಕೆ ಸಮ್ಯಗ್ದರ್ಶನ ಗುಣದ ಪ್ರಾದುರ್ಭಾವವಾಗು
ತ್ತದೆ. ಮೂರನೆಯ ಗುಣಸ್ಥಾನವು ಸಮ್ಯಗ್ಮಿಥ್ಯಾತ್ವ
ರೂಪಿ ದರ್ಶನಮೋಹನೀಯಕರ್ಮದ ಉದಯ
ದಿಂದ ಆಗುತ್ತದೆ. ಈ ಗುಣಸ್ಥಾನದಲ್ಲಿ ಆತ್ಮದ ಪರಿ
ಣಾಮ ಸಮ್ಯಕ್ ಮತ್ತು ಮಿಥ್ಯಾತ್ವ ಅರ್ಥಾತ್
ಉಭಯ ಸ್ವರೂಪದವಿರುತ್ತವೆ. ಮೊದಲನೆಯ
ಗುಣಸ್ಥಾನದಲ್ಲಿ ಔದಯಿಕಭಾವ, ನಾಲ್ಕನೆಯ
ಗುಣಸ್ಥಾನದಲ್ಲಿ ಔಪಶಮಿಕ, ಕ್ಷಾಯಿಕ ಅಥವಾ
ಕ್ಷಾಯೋಪಶಮಿಕಭಾವ, ಮತ್ತು ಮೂರನೆಯ
ಗುಣಸ್ಥಾನದಲ್ಲಿ ಕ್ಷಾಯೋಪಶಮಿಕ, ಹೀಗೆ ಭಾವ
ಗಳು ಆಗುತ್ತವೆ. ಆದರೆ ಎರಡನೆಯ ಗುಣಸ್ಥಾನವು
ದರ್ಶನಮೋಹನೀಯಕರ್ಮದ ಉದಯ, ಉಪ
ಶಮ, ಕ್ಷಯ ಮತ್ತು ಕ್ಷಯೋಪಶಮ, ಈ ನಾಲ್ಕು
ಅವಸ್ಥೆಯೊಳಗಿಂದ ಒಂದರ ಅಪೇಕ್ಷೆಯನ್ನೂ ಇಡು
ವದಿಲ್ಲ, ಅಂತ ಆ ಸ್ಥಳದಲ್ಲಿ ದರ್ಶನಮೋಹನೀಯ
ಕರ್ಮದ ಅಪೇಕ್ಷೆಯಿಂದ ಪಾರಿಣಾಮಿಕ ಭಾವಗಳಿ
ರುವವು; ಆದರೆ ಅನಂತಾನುಬಂಧೀಸ್ವರೂಪ ಚಾರಿ

ತ್ರಮೋಹನೀಯಕರ್ಮದ ಉದಯವಿದ್ದದರಿಂದ, ಈ ಗುಣಸ್ಥಾನದಲ್ಲಿ ಚಾರಿತ್ರಮೋಹನೀಯಕರ್ಮದ ಅಪೇಕ್ಷೆಯಿಂದ ಔದಯಿಕಭಾವವೂ ಇರುತ್ತದೆಂದು ಅನ್ನಬೇಕಾಗುತ್ತದೆ. ಈ ಗುಣಸ್ಥಾನದಲ್ಲಿ ಅನಂತಾನುಬಂಧಿಯ ಉದಯದಿಂದ ಸಮ್ಯಕ್ತ್ವವು ಘಾತವಾಗಿದ್ದದರಿಂದ ಸಮ್ಯಕ್ತ್ವ ಇಲ್ಲ, ಮತ್ತು ಮಿಥ್ಯಾತ್ವದ ಉದಯವೂ ಇನ್ನೂ ಪ್ರಾಪ್ತವಾಗಿಲ್ಲ, ಆದ್ದರಿಂದ ಮಿಥ್ಯಾತ್ವ ಪರಿಣಾಮಗಳು ಇರುವದಿಲ್ಲ. ಅತಏತ ಈ ಗುಣಸ್ಥಾನವು ಮಿಥ್ಯಾತ್ವ ಮತ್ತು ಸಮ್ಯಕ್ತ್ವ ಈ ಎರಡರ ಅಪೇಕ್ಷೆಯಿಂದ ಅನುಭಯರೂಪವಾಗಿರುವದು. ಐದನೆಯ ಗುಣಸ್ಥಾನದಿಂದ ಹತ್ತನೆಯ ಗುಣಸ್ಥಾನದವರೆಗಿನ, ಆರು ಗುಣಸ್ಥಾನಗಳು ಚಾರಿತ್ರಮೋಹನೀಯಕರ್ಮದ ಕ್ಷಯೋಪಶಮದಿಂದ ಆಗುತ್ತವೆ, ಆದ್ದರಿಂದ ಈ ಗುಣಸ್ಥಾನದಲ್ಲಿ ಕ್ಷಾಯೋಪಶಮಿಕಭಾವಗಳಾಗುತ್ತವೆ. ಈ ಗುಣಸ್ಥಾನಗಳಲ್ಲಿ ಸಮ್ಯಕ್‌ಚಾರಿತ್ರಗುಣವೃದ್ಧಿಯು ಕ್ರಮವಾಗಿ ಆಗುತ್ತ ಹೋಗುತ್ತದೆ. ಹನ್ನೊಂದನೆಯ ಗುಣಸ್ಥಾನವು ಚಾರಿತ್ರಮೋಹನೀಯಕರ್ಮದ ಉಪಶಮದಿಂದ ಆಗುತ್ತದೆ, ಆದ್ದರಿಂದ ಈ ಗುಣ

ಸ್ಥಾನದಲ್ಲಿ ಔಪಶಮಿಕಭಾವಗಳಾಗುತ್ತವೆ. ಯದ್ಯಪಿ ಈ ಸ್ಥಳದಲ್ಲಿ ಚಾರಿತ್ರಮೋಹನೀಯಕರ್ಮದ ಸಂಪೂರ್ಣ ಉಪಶಮವಾಗಿದ್ದರೂ, ಯೋಗದ ಸದ್ಭಾವವಿದ್ದದರಿಂದ, ಪೂರ್ಣಚಾರಿತ್ರವುಂಟೆಂದು ಹೇಳಲಿಕ್ಕೆ ಬರುವದಿಲ್ಲ, ಯಾಕಂದರೆ:—ಸಮ್ಯಕ್‌ಚಾರಿತ್ರದ ಲಕ್ಷಣದಲ್ಲಿ "ಯೋಗ ಮತ್ತು ಕಷಾಯ ಇವುಗಳ ಅಭಾವವಾದರೆ ಸಮ್ಯಕ್‌ಚಾರಿತ್ರವಾಗುತ್ತದೆ." ಎಂದು ಹೇಳಿದೆ. ಹನ್ನೆರಡನೆಯ ಗುಣಸ್ಥಾನವು ಚಾರಿತ್ರಮೋಹನೀಯಕರ್ಮದ ಕ್ಷಯವಾದರೆ ಪ್ರಾಪ್ತವಾಗುತ್ತದೆ; ಆದ್ದರಿಂದ ಆ ಸ್ಥಳದಲ್ಲಿ ಕ್ಷಾಯಿಕಭಾವವಿರುವದು. ಈ ಗುಣಸ್ಥಾನದಲ್ಲಿಯಾದರೂ ಹನ್ನೊಂದನೆಯ ಗುಣಸ್ಥಾನದಂತೆ ಸಮ್ಯಕ್‌ಚಾರಿತ್ರದ ಪೂರ್ಣತೆಯಾಗಿರುವದಿಲ್ಲ;— ಸಮ್ಯಗ್‌ಜ್ಞಾನವೆಂಬ ಗುಣವು ನಾಲ್ಕನೆಯ ಗುಣಸ್ಥಾನದಂತೆ ಪ್ರಕಟವಾಗಿದ್ದರೂ, ಇನ್ನೂ ಅದು ಪೂರ್ಣವಾಗಿರುವದಿಲ್ಲ. ಭಾವಾರ್ಥ—ಆತ್ಮದ ಜ್ಞಾನಗುಣವು ಅನಾದಿಕಾಲದಿಂದ ಪ್ರವಾಹರೂಪದಿಂದ ನಡೆಯುತ್ತ ಬಂದಿದ್ದರೂ, ದರ್ಶನಮೋಹನೀಯಕರ್ಮದ ಉದಯವಿದ್ದದರಿಂದ, ಅದು ಮಿಥ್ಯಾತ್ವಸ್ವರೂ

ಪದ್ದು ಆಗಿತ್ತು. ಆದರೆ ನಾಲ್ಕನೆಯ ಗುಣಸ್ಥಾನ ದಲ್ಲಿ ಯಾವಾಗ್ಗೆ ದರ್ಶನಮೋಹನೀಯಕರ್ಮದ ಉದಯವು ಅಭಾವವಾಯಿತು, ಆಗ್ಗೆ ಅದೇ ಆತ್ಮದ ಗುಣವು ಸಮ್ಯಗ್‌ಜ್ಞಾನವೆನಿಸಿಕೊಳ್ಳಹತ್ತಿತು. ಐದ ನೆಯ, ಆರನೆಯ ಮುಂತಾದ ಗುಣಸ್ಥಾನಗಳಲ್ಲಿ ತಪ ಶ್ಚರ್ಯದ ನಿಮಿತ್ತದಿಂದ ಅವಧಿ ಮನಃಪರ್ಯಾಯ ಜ್ಞಾನವೂ ಕ್ವಚಿತವಾಗಿ ಯಾವದಾದರೊಂದು ಜೀವಿ ಗೆ ಪ್ರಕಟವಾಗಿ ಹೋಗುವದು, ಆದರೂ ಕೇವಲ ಜ್ಞಾನವಾದವಿನಾ ಸಮ್ಯಗ್‌ಜ್ಞಾನದ ಪೂರ್ಣತೆಯು ಆಗಲು ಶಕ್ತವಾಗುವದಿಲ್ಲ. ಆದ್ದರಿಂದ ಈ ಹನ್ನೆ ರಡನೆಯ ಗುಣಸ್ಥಾನದವರೆಗೆ ಸಮ್ಯಗ್ದರ್ಶನದ ಪೂ ರ್ಣತೆಯು ಆಗಿಹೋಗಿದ್ದರೂ, ಸಮ್ಯಗ್‌ಜ್ಞಾನ ಮತ್ತು ಸಮ್ಯಗ್‌ಚಾರಿತ್ರ ಈ ಗುಣಗಳು ಇನ್ನೂ ಅಪೂರ್ಣವಾಗಿಯೇ ಇರುವದರಿಂದ ಮೋಕ್ಷವಾ ಗುವದಿಲ್ಲ. ಹದಿಮೂರನೆಯ ಗುಣಸ್ಥಾನವು ಯೋ ಗದ ಸದ್ಭಾವದ ಅಪೇಕ್ಷೆಯಿಂದ ಆಗುತ್ತಿರುತ್ತದೆ, ಆದ್ದರಿಂದ ಇದರ ಹೆಸರು ಸಂಯೋಗ, ಮತ್ತು ಕೇವ ಲಜ್ಞಾನದ ನಿಮಿತ್ತದಿಂದ ಸಯೋಗಕೇವಲಿ ಎಂದು ಇರುವದು. ಈ ಗುಣಸ್ಥಾನದಲ್ಲಿ ಸಮ್ಯಗ್

ಜ್ಞಾನದ ಪೂರ್ಣತೆಯಾಗಿ ಹೋಗುತ್ತದೆ, ಆದರೆ ಚಾರಿತ್ರಗುಣದ ಪೂರ್ಣತೆಯಾಗುವದಿಲ್ಲ, ಆದ್ದರಿಂದ ಮೋಕ್ಷ ಆಗುವದಿಲ್ಲ. ಹದಿನಾಲ್ಕನೆಯ ಗುಣಸ್ಥಾನವು ಯೋಗದ ಅಭಾವವಾಯಿತೆಂದರೆ ಆಗುತ್ತದೆ, ಆದ್ದರಿಂದ ಇದರ ಹೆಸರು ಅಯೋಗಕೇವಲಿ ಎಂದಿರುವದು. ಈ ಗುಣಸ್ಥಾನದಲ್ಲಿ ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಸಮ್ಯಗ್‌ಚಾರಿತ್ರ ಈ ಮೂರೂ ಗುಣಗಳ ಪೂರ್ಣತೆಯಾಗುತ್ತದೆ; ಆದ್ದರಿಂದ ಮೋಕ್ಷವಾದರೂ ಇನ್ನು ದೂರ ಉಳಿಯುವದಿಲ್ಲ. ಅರ್ಥಾತ್ "ಇ, ಉ, ಋ, ಌ" ಈ ಐದು ಹ್ರಸ್ವ ಸ್ವರಗಳ ಉಚ್ಚಾರಮಾಡಲಿಕ್ಕೆ ಎಷ್ಟು ಹೊತ್ತು ಹತ್ತುವದೋ, ಅಷ್ಟು ಹೊತ್ತಿನಲ್ಲಿ ಹದಿನಾಲ್ಕನೆಯ ಗುಣಸ್ಥಾನದಲ್ಲಿ ಮೋಕ್ಷ ಪ್ರಾಪ್ತಿಯಾಗುತ್ತದೆ.

೫೫ ಪ್ರ.—ಮಿಥ್ಯಾತ್ವಗುಣಸ್ಥಾನದ ಸ್ವರೂಪ ಹೇಗಿರುವದು?

ಉ.—ಮಿಥ್ಯಾತ್ವ ಪ್ರಕೃತಿಯ ಉದಯದಿಂದ ಆತ್ಮದ ಅತತ್ವಶ್ರದ್ಧಾರೂಪ ಪರಿಣಾಮವಾಗುವದಕ್ಕೆ ಮಿಥ್ಯಾತ್ವಗುಣಸ್ಥಾನ ಅನ್ನುವರು. ಈ ಗುಣಸ್ಥಾನದಲ್ಲಿದ್ದಂಥ ಜೀವವು ವಿಪರೀತ ಶ್ರದ್ಧೆಯನ್ನು ಮಾಡುತ್ತಿ

ರುತ್ತದೆ. ನಿಜವಾದ ಧರ್ಮದ ಕಡೆಗೆ ಅದಕೆ ರುಚಿಯುಂಟಾಗಲು ಶಕ್ಯವಿಲ್ಲ. ಪಿತ್ತಜ್ವರ ಬಂದ ರೋಗಿಗೆ ದುಗ್ಧಾದಿರಸಗಳು ಹ್ಯಾಗೆ ವಿಷವಾಗುತ್ತ ವೋ, ಹಾಗೆ ಇದಕ್ಕ್ಯಾದರೂ ಸಮಿೂಚೀನ (ಉತ್ತ ಮ) ಧರ್ಮವು ಚಲೋ ಅನಿಸುವದಿಲ್ಲ.

೫೯೬ ಪ್ರ.—ಮಿಥ್ಯಾತ್ವಗುಣಸ್ಥಾನದಲ್ಲಿ ಯಾವ ಯಾವ ಪ್ರಕೃತಿ ಗಳ ಬಂಧವಾಗುತ್ತದೆ?

ಉ.—ಕರ್ಮದ ೧೪೮ ಪ್ರಕೃತಿಗಳೊಳಗಿಂದ, ಸ್ಪರ್ಶಾದಿ ೨೦ ಪ್ರಕೃತಿಗಳ ಅಭೇದವಿವಕ್ಷೆಯಿಂದ ಸ್ಪರ್ಶಾದಿ ನಾಲ್ಕರಲ್ಲಿ, ಮತ್ತು ಬಂಧನ ೫, ಸಂಘಾತ ೫ ಇವು ಗಳವೂ ಅಭೇದವಿವಕ್ಷೆಯಿಂದ ಐದು ಶರೀರಗಳಲ್ಲಿ ಅಂತರ್ಭಾವವಾಗುತ್ತದೆ. ಇದರಿಂದ ಭೇದವಿವಕ್ಷೆ ಯಿಂದ ಸರ್ವ ಪ್ರಕೃತಿ ೧೪೮ ಮತ್ತು ಅಭೇದವಿವ ಕ್ಷೆಯಿಂದ ೧೨೨ ಆಗುತ್ತವೆ. ಸಮ್ಯಗ್‌ಮಿಥ್ಯಾತ್ವ ಮತ್ತು ಸಮ್ಯಕ್‌ಪ್ರಕೃತಿ ಇವೆರಡು ಪ್ರಕೃತಿಗಳ ಬಂಧವಾಗುವದಿಲ್ಲ. ಯಾಕಂದರೆ, ಇವೆರಡು ಪ್ರಕೃ ತಿಗಳ ಸತ್ತಾ (ಅಸ್ತಿತ್ವ) ಸಮ್ಯಕ್ತ್ವ ಪರಿಣಾಮ ದಿಂದ ಮಿಥ್ಯಾತ್ವಪ್ರಕೃತಿಯು ಮೂರು ಖಂಡ (ಭಾಗ)

ಮಾಡುವದರಿಂದ ಆಗುತ್ತದೆ; ಆದ್ದರಿಂದ ಅನಾದಿ ಮಿಥ್ಯಾದೃಷ್ಟಿ ಜೀವಿಗಳ ಬಂಧಯೋಗ್ಯ ಪ್ರಕೃತಿ ೧೨೦, ಮತ್ತು ಸತ್ವಯೋಗ್ಯಪ್ರಕೃತಿ ೧೪೬ ಇರುವವು. ಮಿಥ್ಯಾತ್ವಗುಣಸ್ಥಾನದಲ್ಲಿ ತೀರ್ಥಂಕರ ಪ್ರಕೃತಿ, ಆಹಾರಕಶರೀರ, ಮತ್ತು ಆಹಾರಕ ಅಂಗೋಪಾಂಗ ಈ ಮೂರು ಪ್ರಕೃತಿಗಳ ಬಂಧವು ಸಮ್ಯಗ್‌ದೃಷ್ಟಿ ಜೀವಿಗಳೇ ಆಗುವದು. ಆದ್ದರಿಂದ ಈ ಗುಣಸ್ಥಾನದಲ್ಲಿ ೧೨೦ ರೊಳಗಿಂದ ಈ ಮೂರು ಕಳೆದರೆ ೧೧೭ ಪ್ರಕೃತಿಗಳ ಬಂಧವಾಗುವದು.

೩೯೭ ಪ್ರ.—ಮಿಥ್ಯಾತ್ವಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುತ್ತದೆ?

ಉ.— ಸಮ್ಯಕ್ತ್ವಪ್ರಕೃತಿ, ಸಮ್ಯಗ್ಮಿಥ್ಯಾತ್ವ, ಆಹಾರಕ ಶರೀರ, ಆಹಾರಕ ಅಂಗೋಪಾಂಗ ಮತ್ತು ತೀರ್ಥಂಕರಪ್ರಕೃತಿ ಈ ಐದು ಪ್ರಕೃತಿಗಳ ಉದಯವು ಈ ಗುಣಸ್ಥಾನದಲ್ಲಿ ಆಗುವದಿಲ್ಲ, ಅಂತ ೧೨೨ ರಲ್ಲಿ ೫ ಕಡಿಮೆ ಮಾಡಲು ೧೧೭ ಪ್ರಕೃತಿಗಳ ಉದಯವಾಗುತ್ತದೆ.

೩೯೮ ಪ್ರ.—ಮಿಥ್ಯಾತ್ವಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವ (ಅಸ್ತಿತ್ವ) ಉಳಿಯುತ್ತದೆ?

ಉ.—೧೪ಲ ಪ್ರಕೃತಿಗಳ ಸತ್ವ ಇರುವದು.

೫೯೯ ಪ್ರ.—ಸಾಸಾದನಗುಣಸ್ಥಾನದ ಸ್ವರೂಪ ಯಾವದು?

ಉ.—ಪ್ರಥಮೋಪಶಮ ಸಮ್ಯಕ್ತ್ವದ ಅವಸ್ಥೆಯಲ್ಲಿ ಯಾವ ಕಾಲಕ್ಕೆ ಹೆಚ್ಚೆಂದರೆ ಆರು ಆವಲಿ ಮತ್ತು ಕಡಿಮೆ ಯೆಂದರೆ ಒಂದು ಸಮಯ ಬಾಕಿ ಉಳಿಯುತ್ತದೆ, ಆ ಕಾಲಕ್ಕೆ ಯಾವದಾದರೊಂದು ಅನಂತಾನುಬಂಧಿ ಕಷಾಯದ ಉದಯದಿಂದ ಯಾವ ಜೀವಿಯ ಸಮ್ಯಕ್ತ್ವವು ನಾಶವಾಗಿರುವದೋ, ಆ ಜೀವಿಯು ಸಾಸಾದನ ಗುಣಸ್ಥಾನವರ್ತಿ ಎಂದೆನಿಸಿಕೊಳ್ಳುತ್ತದೆ.

೬೦೦ ಪ್ರ.—ಪ್ರಥಮೋಪಶಮಸಮ್ಯಕ್ತ್ವ ಅಂದರೇನು?

ಉ.—ಸಮ್ಯಕ್ತ್ವದಲ್ಲಿ ಮೂರು ಭೇದಗಳುಂಟು. ಅವು:— ಉಪಶಮ, ಕ್ಷಾಯಿಕ, ಮತ್ತು ಕ್ಷಾಯೋಪಶಮಿಕ. ದರ್ಶನಮೋಹನಿಯಕರ್ಮದ ಮೂರು ಪ್ರಕೃತಿ ಮತ್ತು ಅನಂತಾನುಬಂಧಿಯ ನಾಲ್ಕು ಪ್ರಕೃತಿ, ಹೀಗೆ ಏಳು ಪ್ರಕೃತಿಗಳ ಉಪಶಮವಾಗೋಣದರಿಂದ ಯಾವದು ಉತ್ಪನ್ನವಾಗುವದೋ, ಅದಕ್ಕೆ ಉಪಶಮ ಸಮ್ಯಕ್ತ್ವವೆನ್ನುತ್ತಾರೆ. ಈ ಏಳು ಪ್ರಕೃತಿಗಳ ಕ್ಷಯ ವಾಗಿ ಯಾವದು ಉತ್ಪನ್ನವಾಗುವದೋ, ಅದಕ್ಕೆ

ಕ್ಷಾಯಿಕಸಮ್ಯಕ್ತ್ವ ಅನ್ನುವರು. ಮತ್ತು ಆರು ಪ್ರಕೃತಿಗಳ ಅನುದಯ ಹಾಗು ಸಮ್ಯಕ್ತ್ವಪ್ರಕೃತಿನಾಮಕ ಮಿಥ್ಯಾತ್ವದ ಉದಯದಿಂದ ಯಾವದು ಪ್ರಾಪ್ತವಾಗುವದೋ, ಅದಕ್ಕೆ ಕ್ಷಾಯೋಪಶಮಿಕ ಸಮ್ಯಕ್ತ್ವ ಅನ್ನುವರು. ಉಪಶಮ ಸಮ್ಯಕ್ತ್ವದಲ್ಲಿ ಎರಡು ಭೇದಗಳುಂಟು. ೧ ಪ್ರಥಮೋಪಶಮ ಸಮ್ಯಕ್ತ್ವ ಮತ್ತು ೨ ದ್ವಿತೀಯೋಪಶಮ ಸಮ್ಯಕ್ತ್ವ ಅನಾದಿ ಮಿಥ್ಯಾದೃಷ್ಟಿಯ ಐದು ಹಾಗು ಸಾದಿಮಿಥ್ಯಾದೃಷ್ಟಿಯ ಏಳು ಪ್ರಕೃತಿಗಳ ಉಪಶಮದಿಂದ ಯಾವದಾಗುವದೋ, ಅದಕ್ಕೆ ಪ್ರಥಮೋಪಶಮ ಸಮ್ಯಕ್ತ್ವ ಅನ್ನುವರು.

೬೦೧ ಪ್ರ.—ದ್ವಿತೀಯೋಪಶಮಸಮ್ಯಕ್ತ್ವ ಎಂದು ಯಾತಕ್ಕೆ ಅನ್ನುವರು?

ಉ.—ಏಳನೆಯ ಗುಣಸ್ಥಾನದಲ್ಲಿ, ಕ್ಷಾಯೋಪಶಮಿಕ ಸಮ್ಯಗ್‌ದೃಷ್ಟಿ ಜೀವವು ಶ್ರೇಣಿಯನ್ನು ಹತ್ತುವ ಸನ್ಮುಖ ಅವಸ್ಥೆಯಲ್ಲಿರುವಾಗ ಅನಂತಾನುಬಂಧಿ ಚತುಷ್ಟಯದ ವಿಸಂಯೋಜನ (ಅಪ್ರತ್ಯಾಖ್ಯಾನಾದಿರೂಪ) ಮಾಡಿ, ಮತ್ತು ದರ್ಶನಮೋಹನೀಯದ ಮೂರು ಪ್ರಕೃತಿಗಳ ಉಪಶಮ ಮಾಡಿ, ಯಾವದು

ಸಮ್ಯಕ್ತ್ವವನ್ನು ಪ್ರಾಪ್ತಮಾಡಿಕೊಳ್ಳುವದೋ, ಆದಕ್ಕೆ ದ್ವಿತೀಯೋಪಶಮಸಮ್ಯಕ್ತ್ವ ಅನ್ನುವರು.

೬೦೨ ಪ್ರ.—ಆವಲಿ ಅಂದರೇನು ?

ಉ.—ಅಸಂಖ್ಯಾತ ಸಮಯುಗಳಿಗೆ ಕೂಡಿ ಒಂದು ಆವಲಿ ಅನ್ನುವರು.

೬೦೩ ಪ್ರ.—ಸಾಸಾದನ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧ ವಾಗುವದು ?

ಉ.—ಮೊದಲನೆಯ ಗುಣಸ್ಥಾನದಲ್ಲಿ ಯಾವ ೧೧೭ ಪ್ರಕೃತಿಗಳ ಬಂಧವಾಗುತ್ತದೆಂದು ಹೇಳಿತು, ಅದರೊಳಗಿಂದ ಮಿಥ್ಯಾತ್ವ ಗುಣಸ್ಥಾನದಲ್ಲಿ ಯಾವುಗಳ ವ್ಯುಚ್ಛಿತಿ ( ನಾಶ ) ಆಗಿರುತ್ತದೋ, ಇಂಥ ಹದಿನಾರು ಪ್ರಕೃತಿಗಳನ್ನು ಕಡಿಮೆ ಮಾಡಿದರೆ, ೧೦೧ ಪ್ರಕೃತಿಗಳ ಬಂಧವು ಈ ಸಾಸಾದನ ಗುಣಸ್ಥಾನದಲ್ಲಿ ಆಗುತ್ತದೆ. ಆ ಹದಿನಾರು ಪ್ರಕೃತಿಗಳು ಯಾವವೆಂದರೆ— ೧ ಮಿಥ್ಯಾತ್ವ, ೨ ಹುಂಡಕಸಂಸ್ಥಾನ, ೩ ನಪುಂಸಕವೇದ, ೪ ನರಕಗತಿ, ೫ ನರಕಗತ್ಯಾನುಪೂರ್ವಿ, ೬ ನರಕಾಯು, ೭ ಅಸಂಪ್ರಾಪ್ತಾ ಸೃಪಾಟಿಕಾ ಸಂಹನನ, ೮ ಏಕೇಂದ್ರಿಯಜಾತಿ, ೯ ವಿಕಲತ್ರಯ

ಮೂರು, ೧೨ ಸ್ಥಾವರ, ೧೩ ಆತಾಪ, ೧೪ ಸೂಕ್ಷ್ಮ, ೧೫ ಅಪರ್ಯಾಪ್ತ, ೧೬ ಸಾಧಾರಣ.

೭೦೪ ಪ್ರ.—ವ್ಯುಚ್ಛಿತಿ ಅಂದರೇನು?

ಉ.—ಯಾವ ಗುಣಸ್ಥಾನದಲ್ಲಿ ಕರ್ಮಪ್ರಕೃತಿಗಳ ಬಂಧ, ಉದಯು ಅಥವಾ ಸತ್ವ ಇವುಗಳ ನಾಶವಾಗುವ ದೆಂದು ಹೇಳಿರುವದೋ, ಆ ಗುಣಸ್ಥಾನಗಳವರೆಗೆ ಮಾತ್ರ ಆ ಪ್ರಕೃತಿಗಳ ಬಂಧ, ಉದಯು ಅಥವಾ ಸತ್ವ ಉಳಿಯುವವು. ಮುಂದಿನ ಯಾವ ಗುಣಸ್ಥಾನ ದಲ್ಲಿಯೂ ಆ ಪ್ರಕೃತಿಗಳ ಬಂಧ ಉದಯ ಅಥವಾ ಸತ್ವ ಉಳಿಯುವದಿಲ್ಲ. ಹೀಗೆ ಯಾವ ಪ್ರಕೃತಿಗಳ ಅವಸ್ಥೆಯೋ, ಅದಕ್ಕೆ ವ್ಯುಚ್ಛಿತಿ ಅನ್ನುವರು.

೭೦೫ ಪ್ರ.—ಸಾಸಾದನ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯುವಿರುತ್ತದೆ?

ಉ.—ಮೊದಲನೆಯ ಗುಣಸ್ಥಾನದಲ್ಲಿ ಯಾವ ೧೧೭ ಪ್ರಕೃತಿಗಳ ಉದಯುವಾಗುತ್ತದೆ, ಅವುಗಳೊಳಗಿಂದ ಮಿಥ್ಯಾತ್ವ, ಆತಪ, ಸೂಕ್ಷ್ಮ, ಅಪರ್ಯಾಪ್ತ ಮತ್ತು ಸಾಧಾರಣ ಈ ಐದು ಮಿಥ್ಯಾತ್ವಗುಣಸ್ಥಾನಗಳ ವ್ಯುಚ್ಛಿನ್ನಪ್ರಕೃತಿಗಳನ್ನು ಕಡಿಮೆ ಮಾಡಲು, ೧೧೨

ಉಳಿಯುತ್ತವೆ. ಆದರೆ ಈ ಗುಣಸ್ಥಾನದಲ್ಲಿ ನರಕ ಗತ್ಯಾನುಪೂರ್ವಿಯ ಉದಯವಾಗುವದಿಲ್ಲ. ಅಂತೇ ೧೧೧ ಪ್ರಕೃತಿಗಳವಷ್ಟೇ ಉದಯ ಉಂಟೆಂದು ತಿಳಿಯಬೇಕು.

೬೦೬ ಪ್ರ.—ಸಾಸಾದನ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವ (ಅಸ್ತಿತ್ವವು) ಇರಲು ಶಕ್ತವಾಗುವದು?

ಉ.—೧೪೫ ಪ್ರಕೃತಿಗಳ ಸತ್ವವು ಇರಲು ಶಕ್ತವಾಗುವದು. ಈ ಸ್ಥಳದಲ್ಲಿ ತೀರ್ಥಕರ ಪ್ರಕೃತಿ, ಆಹಾರಕ, ಮತ್ತು ಆಹಾರಕ ಅಂಗೋಪಾಂಗ ಈ ಮೂರು ಪ್ರಕೃತಿಗಳ ಅಸ್ತಿತ್ವ ಇಲ್ಲ.

೬೦೭ ಪ್ರ.—ಮೂರನೆಯ ಮಿಶ್ರಗುಣಸ್ಥಾನ ಅಂದರೇನು?

ಉ.—ಸಮ್ಯಗ್‌ಮಿಥ್ಯಾತ್ವ ಪ್ರಕೃತಿಗಳ ಉದಯದಿಂದ ಜೀವದ ಕೇವಲ ಸಮ್ಯಕ್ತ್ವರೂಪ ಪರಿಣಾಮಗಳೂ ಆಗುವದಿಲ್ಲ, ಮತ್ತು ಕೇವಲ ಮಿಥ್ಯಾತ್ವರೂಪ ಪರಿಣಾಮಗಳೂ, ಆಗುವದಿಲ್ಲ; ಆದರೆ ಮಿಶ್ರಮಾಡಿದ ಮೊಸರು ಹಾಗು ಬೆಲ್ಲದಂತೆ, ಬೇರೇ ಜಾತಿಯ ಮಿಶ್ರ ಪರಿಣಾಮಗಳಾಗುತ್ತವೆ, ಇದಕ್ಕೆ ಮಿಶ್ರಗುಣ ಸ್ಥಾನ ಅನ್ನುವರು.

೬೦೮ ಪ್ರ.—ಮಿಶ್ರಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧ ವಾಗುವದು?

ಉ.—ಎರಡನೆಯ ಗುಣಸ್ಥಾನದಲ್ಲಿ ಬಂಧಪ್ರಕೃತಿಗಳು ೧೦೧ ಆಗುವವು. ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ಇಪ್ಪತ್ತೈದು (ಅನಂತಾನುಬಂಧೀಕ್ರೋಧ, ಮಾನ, ಮಾಯಾ, ಲೋಭ, ಸ್ತ್ಯಾನಗೃದ್ಧಿ, ನಿದ್ರಾನಿದ್ರಾ, ಪ್ರಚಲಾಪ್ರಚಲಾ, ದುರ್ಭಗ, ದುಃಸ್ವರ, ಅನಾದೇಯ, ನ್ಯಗ್ರೋಧಸಂಸ್ಥಾನ, ಸ್ವಾತಿಸಂಸ್ಥಾನ, ಕುಬ್ಜಕಸಂಸ್ಥಾನ, ವಾಮನಸಂಸ್ಥಾನ, ವಜ್ರನಾರಾಚಸಂಹನನ, ನಾರಾಚಸಂಹನನ, ಅರ್ಧನಾರಾಚಸಂಹನನ, ಕೀಲಿತಸಂಹನನ, ಅಪ್ರಶಸ್ತವಿಹಾಯೋಗತಿ, ಸ್ತ್ರೀವೇದ, ನೀಚಗೋತ್ರ, ತಿರ್ಯಗ್ಗತಿ, ತಿರ್ಯಗ್ಗತ್ಯಾನುಪೂರ್ವಿ, ತಿರ್ಯಗಾಯು, ಮತ್ತು ಉದ್ಯೋತ) ಕಡಿಮೆ ಮಾಡುವದರಿಂದ ಬಾಕಿ ೭೬ ಉಳಿಯುತ್ತವೆ. ಇವುಗಳೊಳಗಿಂದ, ಈ ಗುಣಸ್ಥಾನದಲ್ಲಿ ಬಂಧವಾಗದೆ ಇರುವಂಥ ಮನುಷ್ಯಾಯು ಮತ್ತು ದೇವಾಯು ಇವೆರಡು ಪ್ರಕೃತಿಗಳನ್ನು ಕಡಿಮೆ ಮಾಡಲು ೭೪ ಪ್ರಕೃತಿಗಳ ಬಂಧವಾಗುವದು. ನರಕಾಯುವಿನ ಮೊದಲನೆಯ ಗುಣಸ್ಥಾನ

ದಲ್ಲಿ ಮತ್ತು ತಿರ್ಯಂಚಾಯುವಿನ ಎರಡನೆಯ ಗುಣ ಸ್ಥಾನದಲ್ಲಿ ವ್ಯುಚ್ಛಿತ್ತಿಯಾಗಿ ಹೋಗಿರುತ್ತದೆ.

೬೦೯ ಪ್ರ.—ಮಿಶ್ರಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯ ವಾಗುತ್ತದೆ?

ಉ.—ಎರಡನೆಯ ಗುಣಸ್ಥಾನದಲ್ಲಿ ೧೧೧ ಪ್ರಕೃತಿಗಳ ಉದಯವಾಗುತ್ತದೆ. ಅದರೊಳಗಿಂದ ವ್ಯುಚ್ಛಿನ್ನ ಪ್ರಕೃತಿ ಒಂಬತ್ತು ( ಅನಂತಾನುಬಂಧಿಯವು ೪, ಏಕೇಂದ್ರಿಯಾದಿ ೪ ಮತ್ತು ಸ್ಥಾವರ ೧ ) ಕಡಿಮೆ ಮಾಡುವದರಿಂದ ೧೦೨ ಪ್ರಕೃತಿಗಳ ಉದಯವಾ ಗುತ್ತದೆ. ಆದರೆ ಇವುಗಳೊಳಗಿಂದ ನರಕಗತ್ಯಾನು ಪೂರ್ವಿಯ ಹೊರತು ( ಯಾಕಂದರೆ ಇವು ಎರಡ ನೆಯ ಗುಣಸ್ಥಾನದಲ್ಲಿ ಕಡಿಮೆ ಮಾಡಲ್ಪಟ್ಟವೆ. ) ಬೇರೆ ಮೂರು ಆನುಪೂರ್ವಿ ಕಡಿಮೆ ಮಾಡುವದ ರಿಂದ ( ಯಾಕಂದರೆ ಮೂರನೆಯ ಗುಣಸ್ಥಾನದಲ್ಲಿ ಮರಣವಾಗದೆ ಇರುವದರಿಂದ ಯಾವ ಆನುಪೂ ರ್ವಿಯ ಉದಯವಿಲ್ಲ ) ಬಾಕಿ ೯೯ ಪ್ರಕೃತಿಗಳು ಉಳಿಯುತ್ತವೆ; ಇವುಗಳಲ್ಲಿ ಒಂದು ಸಮ್ಯಗ್ ಮಿಥ್ಯಾತ್ವ ಪ್ರಕೃತಿಯು ಉದಯವು ಬಂದು ಕೂಡು

ತ್ತದೆ, ಆದ್ದರಿಂದ ಈ ಗುಣಸ್ಥಾನದಲ್ಲಿ ೧೦೦ ಪ್ರಕೃತಿಗಳ ಉದಯುವುಂಟ.

೬೧೦ ಪ್ರ.—ಮಿಶ್ರಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವ ಇರುತ್ತದೆ?

ಉ.—ತೀರ್ಥಂಕರ ಪ್ರಕೃತಿಯನ್ನು ಬಿಟ್ಟು ೧೪೦ ಪ್ರಕೃತಿಗಳ ಸತ್ವವು ಈ ಮಿಶ್ರಗುಣಸ್ಥಾನದಲ್ಲಿ ಇರುತ್ತದೆ.

೬೧೧ ಪ್ರ.—ನಾಲ್ಕನೆಯ ಅವಿರತ ಸಮ್ಯಗ್ದೃಷ್ಟಿನಾಮಕ ಗುಣಸ್ಥಾನದ ಸ್ವರೂಪವೇನು?

ಉ.—ದರ್ಶನಮೋಹನೀಯುವು ಮೂರು, ಮತ್ತು ಅನಂತಾನುಬಂಧಿಯುವು ನಾಲ್ಕು, ಹೀಗೆ ಏಳು ಪ್ರಕೃತಿಗಳ ಉಪಶಮ, ಕ್ಷಯ ಅಥವಾ ಕ್ಷಯೋಪಶಮ ಆಯಿತೆಂದರೆ, ಮತ್ತು ಅಪ್ರತ್ಯಾಖ್ಯಾನಾವರಣ-ಕ್ರೋಧ-ಮಾನ-ಮಾಯಾ-ಲೋಭ ಇವುಗಳ ಉದಯುವಾಯಿತೆಂದರೆ, ವ್ರತರಹಿತ ಸಮ್ಯಕ್ತ್ವ ಧಾರಣ ಮಾಡುವ ಜೀವಿಯು ಚತುರ್ಥಗುಣಸ್ಥಾನವರ್ತಿಯಾಗುತ್ತದೆ.

೬೧೨ ಪ್ರ.—ನಾಲ್ಕನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತದೆ?

ಉ.—ಮೂರನೆಯ ಗುಣಸ್ಥಾನದಲ್ಲಿ ೭೪ ಪ್ರಕೃತಿಗಳ ಬಂಧವಾಗುತ್ತದೆ. ಅವುಗಳಲ್ಲಿ ಮನುಷ್ಯಾಯು ದೇವಾಯು ಮತ್ತು ತೀರ್ಥಂಕರಪ್ರಕೃತಿ ಈ ಮೂರುಗಳನ್ನು ಕೂಡಿಸುವದರಿಂದ ೭೭ ಪ್ರಕೃತಿಗಳ ಬಂಧವು ಈ ಗುಣಸ್ಥಾನದಲ್ಲಿ ಆಗುತ್ತದೆ.

೬೧೩ ಪ್ರ.—ನಾಲ್ಕನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುತ್ತದೆ?

ಉ.—ಮೂರನೆಯ ಗುಣಸ್ಥಾನದಲ್ಲಿ ೧೦೦ ಪ್ರಕೃತಿಗಳ ಉದಯವಾಗುತ್ತದೆ. ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ಸಮ್ಯಗ್‌ಮಿಥ್ಯಾತ್ವ ಇದನ್ನು ಕಡಿಮೆಮಾಡಲು, ೯೯ ಪ್ರಕೃತಿಗಳು ಉಳಿಯುತ್ತವೆ. ಇವುಗಳಲ್ಲಿ ನಾಲ್ಕು ಆನುಪೂರ್ವಿ ಮತ್ತು ಒಂದು ಸಮ್ಯಕ್ಪ್ರಕೃತಿಮಿಥ್ಯಾತ್ವ ಈ ಪ್ರಕೃತಿಗಳನ್ನು ಕೂಡಿಸುವದರಿಂದ ೧೦೪ ಪ್ರಕೃತಿಗಳ ಉದಯವಾಗುತ್ತದೆ.

೬೧೪ ಪ್ರ.—ನಾಲ್ಕನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವ ಇರುತ್ತದೆ?

ಉ.—ಸರ್ವ ಪ್ರಕೃತಿಗಳ ಅಂದರೆ ೧೪೮ ಪ್ರಕೃತಿಗಳ ಸತ್ವ ಇರುತ್ತದೆ. ಆದರೆ ಕ್ಷಾಯಿಕ ಸಮ್ಯಗ್‌ದೃಷ್ಟಿಗೆ

೧೪೧ ಪ್ರಕೃತಿಗಳ ಸತ್ವ ಮಾತ್ರ ಇರುತ್ತದೆ.

೬೧೫ ಪ್ರ.— ದೇಶವಿರತನಾಮಕ ೫ನೆಯ ಗುಣಸ್ಥಾನದ ಸ್ವರೂಪವು ಏನಿರುವದು ?

ಉ.—ಪ್ರತ್ಯಾಖ್ಯಾನಾವರಣ ಕ್ರೋಧ, ಮಾನ, ಮಾಯಾ, ಲೋಭಗಳ ಉದಯದಿಂದ, ಒಂದು ವೇಳೆ ಸಂಯಮ ಭಾವವು ಆಗದಿದ್ದರೂ, ಅಪ್ರತ್ಯಾಖ್ಯಾನಾವರಣ ಕ್ರೋಧ ಮಾನ ಮಾಯಾ ಲೋಭಗಳ ಉಪಶಮದಿಂದ ಶ್ರಾವಕವ್ರತರೂಪ ದೇಶಚಾರಿತ್ರವು ಆಗುತ್ತಿರುತ್ತದೆ. ಇದಕ್ಕೇ ದೇಶವಿರತನಾಮಕ ೫ನೆಯ ಗುಣಸ್ಥಾನ ಅನ್ನುವರು. ೫ನೆಯದರಿಂದ ಆರಂಭ ಮಾಡಿ ಮುಂದಿನ ಎಲ್ಲ ಗುಣಸ್ಥಾನದಲ್ಲಿ ಸಮಗ್ದರ್ಶನ ಮತ್ತು ಸಮ್ಯಗ್ದರ್ಶನದ ಅವಿನಾಭಾವಿ (ಅಂದರೆ ಸಮ್ಯಗ್ದರ್ಶನವನ್ನು ಎಂದೂ ಬಿಟ್ಟಿರದಂಥ) ಸಮ್ಮಗ್‍ಜ್ಞಾನ, ಇವು ಅವಶ್ಯವಾಗುತ್ತವೆ. ಇವುಗಳ ಹೊರತು ೫ನೆಯ ೬ನೆಯ ಮೊದಲಾದ ಗುಣಸ್ಥಾನಗಳು ಎಂದೂ ಆಗುವದಿಲ್ಲ.

೬೧೬ ಪ್ರ.—೫ನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತದೆ?

ಉ.—ನಾಲ್ಕನೆಯ ಗುಣಸ್ಥಾನದಲ್ಲಿ ಯಾವ ೭೭ ಪ್ರಕೃತಿಗಳ ಬಂಧವಾಗುವದೋ, ಅವುಗಳೊಳಗಿಂದ ಹತ್ತು ವ್ಯುಚ್ಛಿನ್ನ ಪ್ರಕೃತಿಗಳನ್ನು ( ಅಪ್ರತ್ಯಾಖ್ಯಾನಾವರಣ ಕ್ರೋಧ, ಮಾನ, ಮಾಯಾ, ಲೋಭ, ಮನುಷ್ಯಗತಿ, ಮನುಷ್ಯಗತ್ಯಾನುಪೂರ್ವಿ, ಮನುಷ್ಯಾಯು, ಔದಾರಿಕ ಶರೀರ, ಔದಾರಿಕ ಅಂಗೋಪಾಂಗ, ಮತ್ತು ವಜ್ರವೃಷಭನಾರಾಚಸಂಹನನ ) ಕಡಿಮೆ ಮಾಡಲು ಉಳಿದ ೬೭ ಪ್ರಕೃತಿಗಳ ಬಂಧವಾಗುತ್ತದೆ.

೬೧೭ ಪ್ರ.—೫ನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುತ್ತದೆ?

ಉ.—ನಾಲ್ಕನೆಯ ಗುಣಸ್ಥಾನದಲ್ಲಿ ಯಾವ ೧೦೪ ಪ್ರಕೃತಿಗಳ ಉದಯವು ಹೇಳಲ್ಪಟ್ಟಿರುವದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ಹದಿನೇಳು ( ಅಪ್ರತ್ಯಾಖ್ಯಾನಾವರಣ ಕ್ರೋಧ, ಮಾನ, ಮಾಯಾ, ಲೋಭ, ದೇವಗತಿ, ದೇವಗತ್ಯಾನುಪೂರ್ವಿ, ದೇವಾಯು, ನರಕಗತಿ, ನರಕಗತ್ಯಾನುಪೂರ್ವಿ, ನರಕಾಯು, ವೈಕ್ರಿಯಕಶರೀರ, ವೈಕ್ರಿಯಕ ಅಂಗೋ

ಪಾಂಗ, ಮನುಷ್ಯಗತ್ಯಾನುಪೂರ್ವಿ, ತಿರ್ಯಗ್ಗತ್ಯಾನುಪೂರ್ವಿ, ದುರ್ಭಗ, ಅನಾದೇಯ, ಅಯಶಃಕೀರ್ತಿ ) ಕಡಿಮೆ ಮಾಡಲು, ಉಳಿದ ೮೭ ಪ್ರಕೃತಿಗಳ ಉದಯವಾಗುತ್ತದೆ.

೬೧೮ ಪ್ರ.—೫ನೆಯ ಗುಣಸ್ಥಾನದಲ್ಲಿ ಸತ್ವವು ಎಷ್ಟು ಪ್ರಕೃತಿಗಳದು ಇರುತ್ತದೆ?

ಉ.—ನಾಲ್ಕನೆಯ ಗುಣಸ್ಥಾನದಲ್ಲಿ ಯಾವ ೧೪೮ ಪ್ರಕೃತಿಗಳ ಸತ್ವ ಇರುವದೆಂದು ಹೇಳಿರುವದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ನರಕಾಯು ಒಂದನ್ನು ಬಿಟ್ಟು ೧೪೭ ಪ್ರಕೃತಿಗಳ ಸತ್ವ ಉಳಿಯುತ್ತದೆ. ಆದರೆ ಕ್ಷಾಯಿಕ ಸಮ್ಯಗ್‌ದೃಷ್ಟಿಯ ಅಪೇಕ್ಷೆಯಿಂದ ೧೪೦ ಪ್ರಕೃತಿಗಳ ಮಾತ್ರ ಸತ್ವವಿರುತ್ತದೆ.

೬೧೯ ಪ್ರ.—೬ನೆಯ ಪ್ರಮತ್ತವಿರತನಾಮಕ ಗುಣಸ್ಥಾನದ ಸ್ವರೂಪವೇನಿರುವದು?

ಉ.—ಸಂಜ್ವಲನ ಮತ್ತು ನೋಕಷಾಯ, ಇವುಗಳ ತೀವ್ರ ಉದಯದಿಂದ ಸಂಯಮಭಾವ ಮತ್ತು ಮಲಜನಕ ಪ್ರಮಾದ, ಇವೆರಡೂ ಯುಗಪತ್ ಉತ್ಪನ್ನವಾಗುತ್ತವೆ. ( ಒಂದು ವೇಳೆ ಸಂಜ್ವಲನ ಮತ್ತು ನೋಕ

ಷಾಯಗಳ ಉದಯ ಚಾರಿತ್ರ ಗುಣಗಳ ವಿರೋಧಿ ಯಾದರೂ ಪ್ರತ್ಯಾಖ್ಯಾನಾವರಣ ಕಷಾಯಗಳ ಉಪಶಮ ಆಗುವದರಿಂದ, ಪ್ರಾದುರ್ಭೂತವಾದ ಸಕಲ ಸಂಯಮಗಳ ಘಾತ ಮಾಡಲಿಕ್ಕೆ ಅದು ಸಮರ್ಥವಾಗುವದಿಲ್ಲ. ಆದ್ದರಿಂದ ಉಪಚಾರನಯ ದಿಂದ ಇದಕ್ಕೆ ಸಂಯಮದ ಉತ್ಪಾದಕವೆಂದು ಅಂದಿರುವದು) ಆದ್ದರಿಂದ ಈ ಗುಣಸ್ಥಾನವರ್ತಿ ಮುನಿಗಳಿಗೆ ಪ್ರಮತ್ತವಿರತ ಅರ್ಥಾತ್ ಚಿತ್ರಲಾಚ ರಣಿ ಅನ್ನುವರು.

೬೨೦ ಪ್ರ.—ಆರನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧ ವಾಗುವದು?

ಉ.—೫ನೆಯ ಗುಣಸ್ಥಾನದಲ್ಲಿ ಯಾವ ೬೭ ಪ್ರಕೃತಿಗಳ ಬಂಧವಾಗುತ್ತದೋ, ಅವುಗಳೊಳಗಿಂದ ಪ್ರತ್ಯಾಖ್ಯಾ ನಾವರಣ ಕ್ರೋಧ, ಮಾನ, ಮಾಯಾ, ಲೋಭ— ಇವು ನಾಲ್ಕನ್ನು ಕಡಿಮೆ ಮಾಡಲು, ಉಳಿದ ೬೩ ಪ್ರಕೃತಿಗಳ ಬಂಧವು ಈ ಆರನೆಯ ಗುಣಸ್ಥಾನದ ಲ್ಲಾಗುವದು.

೬೨೧ ಪ್ರ.—ಆರನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದ

ವಾಗುತ್ತದೆ?

ಉ.—೫ನೆಯ ಗುಣಸ್ಥಾನದಲ್ಲಿ ೮೭ ಪ್ರಕೃತಿಗಳ ಉದಯವು ಹೇಳಲ್ಪಟ್ಟಿರುವದು. ಅವುಗಳೊಳಗಿಂದ ವ್ಯಚ್ಛಿನ್ನ ಪ್ರಕೃತಿ ಎಂಟು—(ಪ್ರತ್ಯಾಖಾನಾವರಣ ಕ್ರೋಧ, ಮಾನ, ಮಾಯಾ, ಲೋಭ, ತಿರ್ಯಗ್ಗತಿ, ತಿರ್ಯಗ್ಗಾಯು, ಉದ್ಯೋತ ಮತ್ತು ನೀಚಗೋತ್ರ) ಕಡಿಮೆ ಮಾಡುವದರಿಂದ ಬಾಕಿ ೭೯ ಉಳಿದವು. ಇವುಗಳಲ್ಲಿ ಆಹಾರಕ ಶರೀರ, ಮತ್ತು ಆಹಾರಕ ಆಂಗೋಪಾಂಗ ಇವೆರಡು ಪ್ರಕತಿಗಳನ್ನು ಕೂಡಿಸುವದರಿಂದ ೮೧ ಪ್ರಕೃತಿಗಳ ಉದಯವು ಈ ಆರನೆಯ ಗುಣಸ್ಥಾನದಲ್ಲಿ ಆಗುತ್ತದೆ.

೬೨೨ ಪ್ರ.—೬ನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವವು ಉಳಿಯುತ್ತದೆ?

ಉ.—೫ನೆಯ ಗುಣಸ್ಥಾನದಲ್ಲಿ ೧೪೭ ಪ್ರಕೃತಿಗಳ ಸತ್ವವು ಹೇಳಲ್ಪಟ್ಟಿರುವದು. ಅವುಗಳಲ್ಲಿ ವ್ಯಚ್ಛಿನ್ನ ಪ್ರಕೃತಿ ಒಂದು ತಿರ್ಯಗಾಯು ಎಂಬದನ್ನು ಕಡಿಮೆ ಮಾಡಲು, ೧೪೬ ಪ್ರಕೃತಿಗಳ ಸತ್ವವು ಈ ಗುಣಸ್ಥಾನದಲ್ಲಿ ಉಳಿಯುತ್ತದೆ. ಆದರೆ ಕ್ಷಾಯಿಕ ಸಮ್ಯಗ್

ದೃಷ್ಟಿಗೆ ೧೪೭ ಪ್ರಕೃತಿಗಳದೇ ಸತ್ವ ಇರುತ್ತದೆ.

೬೨೩ ಪ್ರ.—ಅಪ್ರ ಮತ್ತು ವಿರತನಾಮಕ ಏಳನೆಯ ಗುಣಸ್ಥಾನದ ಸ್ವರೂಪವೇನು?

ಉ.—ಸಂಜ್ವಲನ ಮತ್ತು ನೋಕಷಾಯ, ಇವುಗಳ ಮಂದ ಉದಯದಿಂದ ಪ್ರಮಾದರಹಿತ ಸಂಯಮಭಾವ ಆಗುತ್ತವೆ. ಆದ್ದರಿಂದ ಈ ಗುಣಸ್ಥಾನವರ್ತಿ ಮುನಿಗೆ ಅಪ್ರಮತ್ತವಿರತ ಅನ್ನುವರು.

೬೨೪ ಪ್ರ.—ಅಪ್ರಮತ್ತವಿರತ ಗುಣಸ್ಥಾನದಲ್ಲಿ ಭೇದಗಳೆಷ್ಟು?

ಉ.—ಎರಡು ಅವು:—೧ ಸ್ವಸ್ಥಾನ ಅಪ್ರಮತ್ತವಿರತ, ೨ ಸಾತಿಶಯ ಅಪ್ರಮತ್ತವಿರತ.

೬೨೫ ಪ್ರ.—ಸ್ವಸ್ಥಾನ ಅಪ್ರಮತ್ತವಿರತ ಎಂದು ಯಾತಕ್ಕೆ ಅನ್ನುವರು?

ಉ.—ಸಾವಿರಾರು ಸಾರೆ ಆರನೇ ಗುಣಸ್ಥಾನದೊಳಗಿಂದ ಏಳನೆಯ ಗುಣಸ್ಥಾನಕ್ಕೆ, ಮತ್ತು ಏಳನೇದರೊಳಗಿಂದ ಆರನೇದಕ್ಕೆ ಬರತಕ್ಕ ಹಾಗು ಹೋಗತಕ್ಕವರಿಗೆ ಸ್ವಸ್ಥಾನ ಅಪ್ರಮತ್ತವಿರತರೆನ್ನುತ್ತಾರೆ.

೬೨೬ ಪ್ರ.—ಸಾತಿಶಯ ಅಪ್ರಮತ್ತವಿರತ ಅಂದರೇನು?

ಉ.—ಶ್ರೇಣಿಯನ್ನು ಹತ್ತಲಿಕ್ಕೆ ಸನ್ಮುಖರಾದವರಿಗೆ ಸಾತಿ

ಶಯು ಅಪ್ರಮತ್ತವಿರತರೆನ್ನುತ್ತಾರೆ.

೬೨೭ ಪ್ರ.—ಶ್ರೇಣಿಯನ್ನು ಏರಲಿಕ್ಕೆ ಯಾರು ಯೋಗ್ಯರು?

ಉ.—ಕ್ಷಾಯಿಕ ಸಮ್ಯಗ್ದೃಷ್ಟಿ ಮತ್ತು ದ್ವಿತೀಯೋಪಶಮಸಮ್ಯಗ್ದೃಷ್ಟಿಗಳೇ ಶ್ರೇಣಿಯನ್ನು ಹತ್ತಲಿಕ್ಕೆ ಪಾತ್ರರು. ಪ್ರಥಮೋಪಶಮಸಮ್ಯಕ್ತ್ವಧಾರಿಗಳು ಮತ್ತು ಕ್ಷಾಯೋಪಶಮಿಕ ಸಮ್ಯಕ್ತ್ವ ಧಾರಿಗಳು ಶ್ರೇಣಿಯನ್ನೇರಲು ಸಮರ್ಥರಾಗಲಾರರು. ಪ್ರಥಮೋಪಶಮ ಸಮ್ಯಕ್ತ್ವವುಳ್ಳವರು ಪ್ರಥಮೋಪಶಮ ಸಮ್ಯಕ್ತ್ವವನ್ನು ಬಿಟ್ಟು, ಕ್ಷಾಯೋಪಶಮಿಕ ಸಮ್ಯಗ್ದೃಷ್ಟಿಯಾಗಿ ಪ್ರಾರಂಭದಲ್ಲಿಯೇ ಅನಂತಾನಂತಬಂಧಿ ಕ್ರೋಧ ಮಾನ ಮಾಯಾ ಲೋಭಗಳ ವಿಸಂಯೋಜನ ಮಾಡಿ, ದರ್ಶನಮೋಹನೀಯ ಮೂರು ಪ್ರಕೃತಿಗಳ ಉಪಶಮ ಮಾಡಬೇಕು. ಮತ್ತು ದ್ವಿತೀಯೋಪಶಮ ಸಮ್ಯಗ್ದೃಷ್ಟಿಯಾಗಿ ಹೋಗಬೇಕು. ಅಥವಾ ಮೂರೂ ಪ್ರಕೃತಿ ಕ್ಷಯ ಮಾಡಿ, ಕ್ಷಾಯಿಕಸಮ್ಯಗ್ದೃಷ್ಟಿಯಾಗಬೇಕು. ಅಂದರೆ ಅವನು ಶ್ರೇಣಿಯನ್ನು ಏರಲಿಕ್ಕೆ ಪಾತ್ರನಾಗುತ್ತಾನೆ.

೬೨೮ ಪ್ರ.—ಶ್ರೇಣಿ ಅಂದರೇನು ?

ಉ.—ಯಾವ ಸ್ಥಳದಲ್ಲಿ ಚಾರಿತ್ರಮೋಹನೀಯ ಕರ್ಮದ ಉಳಿದಂಥ ಇಪ್ಪತ್ತೊಂದು ಪ್ರಕೃತಿಗಳ ಕ್ಷಯ ಅಥವಾ ಉಪಶಮವು ಕ್ರಮದಿಂದ ಆಗುವದೋ ಆ ಸ್ಥಳಕ್ಕೆ ಶ್ರೇಣಿ ಎಂದು ಅನ್ನುವರು.

೬೨೯ ಪ್ರ—ಶ್ರೇಣಿಯಲ್ಲಿ ಭೇದಗಳೆಷ್ಟು?

ಉ.—೧ ಉಪಶಮಶ್ರೇಣಿ ಹಾಗು ೨ ಕ್ಷಪಕಶ್ರೇಣಿ ಎಂದು ಎರಡು ವಿಧವು.

೬೩೦ ಪ್ರ.—ಉಪಶಮಶ್ರೇಣಿಯ ಲಕ್ಷಣವೇನು?

ಉ.—ಯಾತರಲ್ಲಿ ಚಾರಿತ್ರಮೋಹನೀಯ ೨೧ ಪ್ರಕೃತಿಗಳ ಉಪಶಮವಾಗುವದೋ ಅದಕ್ಕೆ ಉಪಶಮಶ್ರೇಣಿ ಅನ್ನುತ್ತಾರೆ.

೬೩೧ ಪ್ರ.—ಕ್ಷಪಕಶ್ರೇಣಿಯ ಸ್ವರೂಪ ಯಾವದು?

ಉ.—ಯಾತರಲ್ಲಿ ಚಾರಿತ್ರಮೋಹನೀಯ ೨೧ ಪ್ರಕೃತಿಗಳ ಕ್ಷಯವಾಗುವದೋ, ಅದಕ್ಕೆ ಕ್ಷಪಕಶ್ರೇಣಿ ಅನ್ನುವರು.

೬೩೨ ಪ್ರ.—ಈ ಎರಡು ಶ್ರೇಣಿಗಳನ್ನು ಯಾವ ಯಾವ ಜೀವಗಳು ಏರುತ್ತವೆ.

ಉ.—ಕ್ಷಾಯಿಕಸಮ್ಯಗ್ದೃಷ್ಟಿಜೀವವು ಎರಡೂ ಶ್ರೇಣಿ

ಗಳನ್ನು ಏರುತ್ತದೆ. ದ್ವಿತೀಯೋಪಶಮ ಸಮ್ಯಗ್ದೃಷ್ಟಿಜೀವವು ಉಪಶಮಶ್ರೇಣಿಯನ್ನು ಮಾತ್ರ ಏರುತ್ತದೆ, ಕ್ಷಪಕಶ್ರೇಣಿಯನ್ನು ಏರುವದಿಲ್ಲ.

೬೩೩ ಪ್ರ.—ಉಪಶಮಶ್ರೇಣಿಯ ಸ್ಥಾನಗಳು ಯಾವವು?

ಉ.—ಎಂಟನೇ, ಒಂಬತ್ತನೇ, ಹತ್ತನೇ ಹಾಗು ಹನ್ನೊಂದನೇ ಹೀಗೆ ನಾಲ್ಕು.

೬೩೪ ಪ್ರ.—ಕ್ಷಪಕಶ್ರೇಣಿಯ ಗುಣಸ್ಥಾನಗಳು ಯಾವವು?

ಉ.—ಎಂಟನೇ, ಒಂಬತ್ತನೇ, ಹತ್ತನೇ ಹಾಗು ಹನ್ನೆರಡನೇ ಹೀಗೆ ನಾಲ್ಕು.

೬೩೫ ಪ್ರ.—ಚಾರಿತ್ರಮೋಹನೀಯ ಕರ್ಮದ ೨೧ ಪ್ರಕೃತಿಗಳ ಉಪಶಮ ಅಥವಾ ಕ್ಷಯಮಾಡಲಿಕ್ಕೆ ಆತ್ಮದ ಯಾವ ಪರಿಣಾಮಗಳು ನಿಮಿತ್ತಕಾರಣವಾಗಿರುತ್ತವೆ?

ಉ.—ಮೂರು ಪರಿಣಾಮಗಳು ನಿಮಿತ್ತಕಾರಣಗಳಾಗಿರುವವು. (೧) ಅಧಃಕರಣ, (೨) ಅಪೂರ್ವಕರಣ, (೩) ಅನಿವೃತ್ತಿಕರಣ.

೬೩೬ ಪ್ರ.—ಅಧಃಕರಣವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರಣದಲ್ಲಿ (ಪರಿಣಾಮಸಮೂಹದಲ್ಲಿ) ಉಪರಿತನ (ಮೇಲೆಮೇಲಿನ) ಸಮಯವರ್ತಿ (ಸಮ

ಯದಲ್ಲಿ ಇರುವ) ಮತ್ತು ಅಧಸ್ತನಸಮಯವರ್ತಿ (ಕೆಳಕೆಳಗಿನ ಸಮಯದಲ್ಲಿ ಇರುವ) ಜೀವಿಗಳ ಪರಿಣಾಮಸದೃಶ (ಒಂದೇಸವನೆ) ಮತ್ತು ವಿಸದೃಶ(ಒಂದೇಸವನೆ ಇಲ್ಲದಿರುವಿಕೆ) ಆಗುತ್ತವೆಯೋ ಅದಕ್ಕೆ ಅಧಃಕರಣ ಅನ್ನುತ್ತಾರೆ. ಈ ಅಧಃಕರಣವು ಏಳನೇ ಗುಣಸ್ಥಾನದಲ್ಲಿ ಆಗುತ್ತದೆ.

೬೩೭ ಪ್ರ.—ಅಪೂರ್ವಕರಣವೆಂದು ಯಾತಕ್ಕೆ ಅನ್ನುತ್ತಾರೆ?

ಉ.—ಯಾವ ಕರಣದಲ್ಲಿ ಉತ್ತರೋತ್ತರ ಅಪೂರ್ವ ಅಪೂರ್ವ ಪರಿಣಾಮಗಳಾಗುತ್ತಹೋಗುತ್ತವೆ, ಅಂದರೆ ಭಿನ್ನಸಮಯವರ್ತಿ ಜೀವಿಗಳ ಪರಿಣಾಮವು ಯಾವಾಗಲೂ ವಿಸದೃಶವಾಗಿಯೂ ಏಕಸಮಯವರ್ತಿ ಜೀವಿಗಳ ಪರಿಣಾಮವು ಸದೃಶ ಹಾಗು ವಿಸದೃಶ ಹೀಗೆ ಎರಡೂ ಪ್ರಕಾರವಾಗಿಯೂ ಆಗುವದೊ, ಅದಕ್ಕೆ ಅಪೂರ್ವಕರಣ ಅನ್ನುತ್ತಾರೆ. ಮತ್ತು ಇದೇ ಎಂಟನೇ ಗುಣಸ್ಥಾನವಾಗಿರುವದು.

೬೩೮ ಪ್ರ.—ಅನಿವೃತ್ತಿಕರಣವೆಂದು ಯಾತಕ್ಕೆ ಅನ್ನುವರು?

ಉ.—ಯಾವ ಕರಣದಲ್ಲಿ (ಪರಿಣಾಮದಲ್ಲಿ) ಭಿನ್ನಸಮಯವರ್ತಿ ಜೀವಿಗಳ ಪರಿಣಾಮವು ವಿಸದೃಶವೇ

ಇದ್ದು, ಏಕಸಮಯವರ್ತಿ ಜೀವಿಗಳ ಪರಿಣಾಮವು ಸದೃಶವೇ ಇರುತ್ತವೆಯೋ ಅದಕ್ಕೆ ಅನಿವೃತ್ತಿಕರಣ ಅನ್ನುತ್ತಾರೆ. ಇದು ಒಂಬತ್ತನೇ ಗುಣಸ್ಥಾನವು. ಈ ಮೂರೂ ಕರಣಗಳ ಪರಿಣಾಮಗಳು ಪ್ರತಿ ಸಮಯಕ್ಕೆ ಅನಂತಗುಣಿವಿಶುದ್ಧತೆಯಾಗಿ ಆಗುತ್ತಿರುತ್ತವೆ.

೬೨೯ ಪ್ರ.—ಅಧಃಕರಣದ ದೃಷ್ಟಾಂತ ಯಾವದು?

ಉ.—ದೇವದತ್ತನೆಂಬ ರಾಜನ ಬಳಿಯಲ್ಲಿ (೩೦೭೨) ಮೂರುಸಾವಿರ ಎಪ್ಪತ್ತೆರಡು ಜನರು ಇದ್ದಾರೆಂತಲೂ, ಅವರು ಹದಿನಾರು ಸ್ಥಳಗಳಲ್ಲಿ ವಿಭಾಗಿಸಲ್ಪಟ್ಟಿರುತ್ತಾರೆಂತಲೂ ಕಲ್ಪಿಸಿರಿ. ಮೊದಲನೆಯ ವಿಭಾಗದಲ್ಲಿ ೧೬೨ ಮನುಷ್ಯರು, ಎರಡನೆಯ ವಿಭಾಗದಲ್ಲಿ ೧೬೬, ಮೂರನೆಯ ವಿಭಾಗದಲ್ಲಿ ೧೭೦, ನಾಲ್ಕನೆಯ ವಿಭಾದಲ್ಲಿ ೧೭೪, ಐದನೆಯ ವಿಭಾಗದಲ್ಲಿ ೧೭೮, ಆರನೆಯ ವಿಭಾಗದಲ್ಲಿ ೧೮೨, ಏಳನೆಯ ವಿಭಾಗದಲ್ಲಿ ೧೮೬, ಎಂಟನೇದರಲ್ಲಿ ೧೯೦, ಒಂಬತ್ತನೇದರಲ್ಲಿ ೧೯೪, ಹತ್ತನೇದರಲ್ಲಿ ೧೯೮, ಹನ್ನೊಂದನೇದರಲ್ಲಿ ೨೦೨, ಹನ್ನೆರಡನೇದರಲ್ಲಿ

೨೦೬, ಹದಿಮೂರರಲ್ಲಿ ೨೧೦, ಹದಿನಾಲ್ಕರಲ್ಲಿ ೨೧೪, ಹದಿನೈದರಲ್ಲಿ ೨೧೮, ಹದಿನಾರರಲ್ಲಿ ೨೨೨, ಈ ಅನುಕ್ರಮದಿಂದ ಒಂದೊಂದರಲ್ಲಿ ಹದಿನಾರು ವಿಭಾಗಗಳಲ್ಲಿ ಅವರು ಕೆಲಸ ಮಾಡುತ್ತಿರುವರು.

ಮೊದಲನೆಯ ವಿಭಾಗದೊಳಗಿನ ೧೬೨ ಮನುಷ್ಯರೊಳಗಿನ ಮೊದಲನೆಯ ಮನುಷ್ಯನ ಸಂಬಳ ೧ ರೂಪಾಯಿ, ಎರಡನೆಯವನಿಗೆ ಎರಡು, ಮೂರನೆಯವನಿಗೆ ಮೂರು, ಹೀಗೆ ಒಂದೊಂದರಂತೆ ಹೆಚ್ಚಾಗುತ್ತ ಕಡೆಯ ೧೬೨ನೇ ಮನುಷ್ಯನ ಸಂಬಳ ೧೬೨ ರೂಪಾಯಿ ಇರುವದು. ಇನ್ನು ಎರಡನೆಯ ವಿಭಾಗದಲ್ಲಿ ಕೆಲಸ ಮಾಡುತ್ತಿರುವಂಥ ಮನುಷ್ಯರೊಳಗಿನ ಮೊದಲನೆಯವನ ಸಂಬಳ ೪೦ ರೂಪಾಯಿ, ಎರಡನೆಯವನಿಗೆ ಒಂದು ಹೆಚ್ಚು ಅಂದರೆ ೪೧ ರೂಪಾಯಿ, ಈ ಕ್ರಮದಿಂದ ಬೆಳೆಯುತ್ತ ಬೆಳೆಯುತ್ತ ೧೬೬ನೇ ಮನುಷ್ಯನ ಸಂಬಳ ೨೦೫ ರೂಪಾಯಿ ಇರುವದು. ಮುಂದಿನ ಮೂರನೇ ವಿಭಾಗದಲ್ಲಿ ೧೭೦ ಜನರು ಕೆಲಸ ಮಾಡುತ್ತಿರುವರು, ಅದರಲ್ಲಿಯ ಮೊದಲನೆಯ ಮನುಷ್ಯನ ಸಂಬಳ ೮೦ ರೂಪಾಯಿ, ಎರಡನೇ, ಮೂರನೇ, ನಾಲ್ಕನೇ ಇತ್ಯಾದಿ ಮನುಷ್ಯರ ಸಂಬಳ ಮೇಲಿನಂತೆಯೇ ಒಂದೊಂದು ರೂಪಾಯಿ ಹೆಚ್ಚಿಗೆ, ಈ ಕ್ರಮದಿಂದ ೧೭೦ನೇ ಮನುಷ್ಯನ ಸಂಬಳ ೨೪೯ ರೂಪಾಯಿ ಆಗು

ವದು. ನಾಲ್ಕನೇ ವಿಭಾಗದೊಳಗಿನ ೧೭೪ ಜನರಲ್ಲಿ ಮೊದಲನೆಯುವನ ಸಂಬಳ ೧೨೧ರಿಂದ ಆರಂಭವಾಗಿ ಕಡೆಯುವನ ಸಂಭಳ ೫೯೪ ರೂಪಾಯಿ ವರೆಗೆ ಇರುವದು. ಇದೇ ಕ್ರಮದಿಂದ ಹದಿನಾರನೆಯು ವಿಭಾಗದೊಳಗಿನ ೨೨೨ ಮನುಷ್ಯರಲ್ಲಿ ಮೊದಲನೆಯುವನ ಸಂಬಳ ೬೯೧ ರೂಪಾಯಿ ಮತ್ತು ಕಡೆಯುವನ ಸಂಬಳ ೯೧೨ ರೂಪಾಯಿ ಇರುವದು. ( ಈ ಬಗ್ಗೆ ವಿಶೇಷವಿವರವನ್ನು ಗೋಮಟಸಾರವೆಂಬ ಗ್ರಂಥದೊಳಗಿನ ಗುಣಸ್ಥಾನಾಧಿ ಕಾರದಲ್ಲಿ ಅಥವಾ ಸುಶೀಲಾ ಉಪನ್ಯಾಸನಾಮಕ ಪುಸ್ತಕದೊಳಗಿನ ೧೩೩ ಪಾನಿನಿಂದ ೧೪೨ ಪಾನಿನವರೆಗೆ ನೋಡಿಕೊಳ್ಳಬೇಕು. )

೬೪೦ ಪ್ರ.—ಏಳನೆಯು ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುವದು ?

ಉ.—ಆರನೆಯು ಗುಣಸ್ಥಾನದಲ್ಲಿ ೬೩ ಪ್ರಕೃತಿಗಳ ಬಂಧವು ಹೇಳಲ್ಪಟ್ಟಿರುವದು. ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೬ ( ಅಸ್ಥಿರ, ಅಶುಭ, ಅಸಾತಾ, ಅಯುಶಃಕೀರ್ತಿ, ಅರತಿ, ಶೋಕ ) ಕಡಿಮೆ ಮಾಡಿದರೆ ಬಾಕಿ ೫೭ ಉಳಿಯುತ್ತವೆ. ಅವುಗಳಲ್ಲಿ ಆಹಾರಕ ಶರೀರ ಹಾಗು ಆಹಾರಕ ಅಂಗೋಪಾಂಗ ಈ ಎರಡು ಪ್ರಕೃತಿಗಳನ್ನು ಕೂಡಿಸುವದರಿಂದ ೫೯ ಪ್ರಕೃತಿ

ಗಳ ಬಂಧವು ಈ ಏಳನೆಯ ಗುಣಸ್ಥಾನದಲ್ಲಾಗುವದು.

೬೪೧ ಪ್ರ—ಏಳನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುತ್ತದೆ?

ಉ.—ಆರನೆಯ ಗುಣಸ್ಥಾನದಲ್ಲಿ ಯಾವ ೮೧ ಪ್ರಕೃತಿಗಳ ಉದಯವನ್ನು ಹೇಳಿರುವದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೫ ( ಆಹಾರಕ ಶರೀರ, ಆಹಾರಕ ಅಂಗೋಪಾಂಗ, ನಿದ್ರಾ ನಿದ್ರಾ, ಪ್ರಚಲಾ ಪ್ರಚಲಾ ಮತ್ತು ಸ್ತ್ಯಾನಗೃದ್ಧಿ ) ಕಡಿಮೆ ಮಾಡಲು ಉಳಿಯುವ ೭೬ ಪ್ರಕೃತಿಗಳ ಉದಯವಾಗುತ್ತದೆ.

೬೪೨ ಪ್ರ.—ಏಳನೆಯ ಗುಣಸ್ಥಾನದಲ್ಲಿ ಸತ್ವವು ಎಷ್ಟು ಪ್ರಕೃತಿಗಳದು ಉಳಿಯುತ್ತದೆ?

ಉ.—ಆರನೆಯ ಗುಣಸ್ಥಾನದಂತೆ ಇದರಲ್ಲಿಯೂ ೧೪೬ ಪ್ರಕೃತಿಗಳ ಸತ್ವವಿರುತ್ತದೆ. ಆದರೆ ಕ್ಷಾಯಿಕ ಸಮ್ಯಗ್ದೃಷ್ಟಿಗೆ ೧೩೯ ಪ್ರಕೃತಿಗಳ ಸತ್ವ ಉಳಿಯುತ್ತದೆ.

೬೪೩ ಪ್ರ.—ಎಂಟನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತದೆ?

ಉ.—ಏಳನೆಯ ಗುಣಸ್ಥಾನದಲ್ಲಿ ಯಾವ ೫೯ ಪ್ರಕೃತಿಗಳ

ಬಂಧವು ಹೇಳಲ್ಪಟ್ಟಿರುವದೋ, ಅದರೊಳಗಿಂದ ದೇವಾಯು ಎಂಬದೊಂದು ವ್ಯುಚ್ಛಿನ್ನ ಪ್ರಕೃತಿಯನ್ನು ಕಡಿಮೆ ಮಾಡಲು, ಉಳಿದ ೫೮ ಪ್ರಕೃತಿಗಳ ಬಂಧವಾಗುತ್ತದೆ.

೬೪೪ ಪ್ರ.—ಎಂಟನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುವದು ?

ಉ.—ಏಳನೆಯ ಗುಣಸ್ಥಾನದಲ್ಲಿ ಯಾವ ೭೬ ಪ್ರಕೃತಿಗಳ ಉದಯವು ಹೇಳಲ್ಪಟ್ಟಿರುವದೋ, ಅದರೊಳಗಿಂದ ನಾಲ್ಕು ವ್ಯುಚ್ಛಿನ್ನ ಪ್ರಕೃತಿಗಳನ್ನು (ಅಮ್ಯಕ್‌ಪ್ರಕೃತಿ, ಅರ್ಧನಾರಾಚ, ಕೀಲಕ, ಅಸಂಪ್ರಾಪ್ತಾಸೃಪಾಟಿಕಾಸಂಹನನ) ಕಡಿಮೆ ಮಾಡುವದರಿಂದ ಉಳಿಯುವ ೭೨ ಪ್ರಕೃತಿಗಳ ಉದಯವಾಗುತ್ತದೆ.

೬೪೫ ಪ್ರ.—ಎಂಟನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವ ನಿಲ್ಲುತ್ತದೆ?

ಉ.—ಏಳನೆಯ ಗುಣಸ್ಥಾನದಲ್ಲಿ ಯಾವ ೧೪೬ ಪ್ರಕೃತಿಗಳ ಸತ್ವವು ಹೇಳಲ್ಪಟ್ಟಿರುವದೋ, ಅದರೊಳಗಿಂದ ನಾಲ್ಕು ವ್ಯುಚ್ಛಿನ್ನ ಪ್ರಕೃತಿಗಳನ್ನು (ಅನಂತಾನುಬಂಧಿ, ಕ್ರೋಧ, ಮಾನ, ಮಾಯಾ, ಲೋಭ)

ಕಡಿಮೆ ಮಾಡುವದರಿಂದ, ದ್ವಿತೀಯೋಪಶಮ ಸಮ್ಯಗ್ದೃಷ್ಟಿ ಉಪಶ್ರೇಣಿವಾನ್ ಜೀವಕ್ಕೆ ೧೪೨ ಪ್ರಕೃತಿಗಳ ಸತ್ವವು ಇರುತ್ತದೆ. ಆದರೆ ಕ್ಷಾಯಿಕ ದೃಷ್ಟಿ ಸಮ್ಯಗ್ದೃಷ್ಟಿ ಉಪಶಮಶ್ರೇಣಿಯುಳ್ಳ ಜೀವಕ್ಕೆ ದರ್ಶನಮೋಹನೀಯ ಮೂರು ಪ್ರಕೃತಿಗಳ ಹೊರತು, ೧೩೯ ಪ್ರಕೃತಿಗಳ ಸತ್ವವು ಇರುತ್ತದೆ. ಮತ್ತು ಕ್ಷಪಕಶ್ರೇಣಿ ಜೀವಕ್ಕೆ ಏಳನೆಯ ಗುಣಸ್ಥಾನದ ಎಂಟು ವ್ಯುಚ್ಛಿನ್ನ ಪ್ರಕೃತಿ (ಅನಂತಾನುಬಂಧಿ, ಕ್ರೋಧ, ಮಾನ, ಮಾಯಾ, ಲೋಭ ಇವು ನಾಲ್ಕು, ದರ್ಶನಮೋಹನೀಯವು ಮೂರು ಮತ್ತು ದೇವಾಯು ಒಂದು ಹೀಗೆ ಎಂಟು) ಕಡಿಮೆಮಾಡುವದರಿಂದ ೧೩೮ ಪ್ರಕೃತಿಗಳ ಸತ್ವವು ಇರುತ್ತದೆ.

೬೪೬ ಪ್ರ.—ಒಂಭತ್ತನೆಯ ಅನಿವೃತ್ತಿಕರಣ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತವೆ.

ಉ.—ಎಂಟನೆಯ ಗುಣಸ್ಥಾನದಲ್ಲಿ ಯಾವ ೫೮ ಪ್ರಕೃತಿಗಳ ಬಂಧವು ಹೇಳಲ್ಪಟ್ಟಿರುವದೋ, ಅದರೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೩೬ (ನಿದ್ರಾ, ಪ್ರಚಲಾ, ತೀರ್ಥಂಕರ, ನಿರ್ಮಾಣ, ಪ್ರಶಸ್ತವಿಹಾಯೋಗತಿ,

ಪಂಚೇಂದ್ರಿಯ ಜಾತಿ, ತೈಜಸಶರೀರ, ಕಾರ್ಮಾಣ ಶರೀರ, ಆಹಾರಕಶರೀರ, ಆಹಾರಕ ಅಂಗೋಪಾಂಗ, ಸಮಚತುಸ್ರಸಂಸ್ಥಾನ, ವೈಕ್ರಿಯಕಶರೀರ, ವೈಕ್ರಿಯಕ ಅಂಗೋಪಾಂಗ, ದೇವಗತಿ, ದೇವ ಗತ್ಯಾನುಪೂರ್ವಿ, ರೂಪ, ರಸ, ಗಂಧ, ಸ್ಪರ್ಶ, ಅಗುರುಲಘುತ್ವ, ಉಪಘಾತ, ಪರಘಾತ, ಉಚ್ಛ್ವಾಸ, ತ್ರಸ, ಬಾದರ, ಪರ್ಯಾಪ್ತ, ಪ್ರತ್ಯೇಕ, ಸ್ಥಿರ, ಶುಭ, ಸುಭಗ, ಸುಸ್ವರ, ಆದೇಯ, ಹಾಸ್ಯ, ರತಿ, ಜುಗುಪ್ಸಾ, ಭಯ ) ಕಡಿಮೆ ಮಾಡುವದರಿಂದ ೨೨ ಪ್ರಕೃತಿಗಳ ಬಂಧವಾಗುತ್ತದೆ.

೬೪೭ ಪ್ರ.—ಒಂಬತ್ತನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುತ್ತದೆ?

ಉ.—ಎಂಟನೆಯ ಗುಣಸ್ಥಾನದಲ್ಲಿ ಯಾವ ೭೨ ಪ್ರಕೃತಿಗಳ ಉದಯವಾಗುತ್ತದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೬ ( ಹಾಸ್ಯ, ರತಿ, ಅರತಿ, ಶೋಕ, ಭಯ ಮತ್ತು ಜುಗುಪ್ಸಾ) ಕಡಿಮೆಮಾಡುವದರಿಂದ ಉಳಿಯುವ ೬೬ ಪ್ರಕೃತಿಗಳ ಉದಯವಾಗುತ್ತದೆ.

೬೪೮ ಪ್ರ.—ಒಂಬತ್ತನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವವು ಉಳಿಯುತ್ತದೆ?

ಉ.—ಎಂಟನೆಯ ಗುಣಸ್ಥಾನದಂತೆ ಈ ಗುಣಸ್ಥಾನದಲ್ಲಿ, ಯೂ ಉಪಶಮ ಶ್ರೇಣಿಯ ದ್ವಿತಿಯೋಪಶಮ ಸಮ್ಯಗ್ದೃಷ್ಟಿಗಳಿಗೆ ೧೪೨, ಕ್ಷಾಯಿಕ ಸಮ್ಯಗ್ದೃಷ್ಟಿಗಳಿಗೆ ೧೩೯, ಮತ್ತು ಕ್ಷಪಕ ಶ್ರೇಣಿಯವರಿಗೆ ೧೩೮ ಪ್ರಕೃತಿಗಳ ಸತ್ವ ಉಳಿಯುತ್ತದೆ.

೬೪೯ ಪ್ರ.—ಹತ್ತನೆಯ ಸೂಕ್ಷ್ಮಸಾಂಪರಾಯ ಗುಣಸ್ಥಾನದ ಸ್ವರೂಪವೇನು?

ಉ.—ಅತ್ಯಂತ ಸೂಕ್ಷ್ಮ ಅವಸ್ಥೆಯನ್ನು ಹೊಂದಿದ ಲೋಭ ಕಷಾಯಗಳ ಉದಯವನ್ನು ಅನುಭವಿಸುವಂಥ ಜೀವಕ್ಕೆ ಸೂಕ್ಷ್ಮಸಾಂಪರಾಯವೆಂಬ ಹತ್ತನೆಯ ಗುಣಸ್ಥಾನವಾಗುತ್ತದೆ.

೬೫೦ ಪ್ರ.—ಹತ್ತನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತದೆ?

ಉ.—ಒಂಬತ್ತನೆಯ ಗುಣಸ್ಥಾನದಲ್ಲಿ ಯಾವ ೨೨ ಪ್ರಕೃತಿಗಳ ಬಂಧವಾಗುತ್ತಿರುವದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೫ (ಪುರುಷವೇದ ಒಂದು, ಮತ್ತು ಸಂಜ್ವಲನ ಕ್ರೋಧ, ಮಾನ, ಮಾಯಾ,

ಲೋಭ ಹೀಗೆ ಐದು ) ಕಡಿಮೆ ಮಾಡುವದರಿಂದ, ಉಳಿಯುವ ೧೭ ಪ್ರಕೃತಿಗಳ ಬಂಧವಾಗುತ್ತದೆ.

೬೫೧ ಪ್ರ.—ಹತ್ತನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯುವಾಗುತ್ತದೆ?

ಉ.—ಒಂಬತ್ತನೆಯ ಗುಣಸ್ಥಾನದಲ್ಲಿ ಯಾವ ೬೬ ಪ್ರಕೃತಿಗಳ ಉದಯುವಾಗುವದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೬ ( ಸ್ತ್ರೀವೇದ, ಪುರುಷವೇದ, ನಪುಂಸಕವೇದ, ಸಂಜ್ವಲನ ಕ್ರೋಧ, ಮಾನ, ಮತ್ತು ಮಾಯಾ ) ಕಡಿಮೆ ಮಾಡುವದರಿಂದ, ಉಳಿಯುವ ೬೦ ಪ್ರಕೃತಿಗಳ ಉದಯುವಾಗುತ್ತದೆ.

೬೫೨ ಪ್ರ.—ಹತ್ತನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವವು ಉಳಿಯುತ್ತದೆ?

ಉ.—ಉಪಶಮ ಶ್ರೇಣಿಯಲ್ಲಂತೂ ಒಂಬತ್ತನೆಯ ಗುಣಸ್ಥಾನದಂತೆ ದ್ವಿತೀಯೋಪಶಮ ಸಮ್ಯಗ್ದೃಷ್ಟಿಗೆ ೧೪೨, ಕ್ಷಾಯಿಕ ಸಮ್ಯಗ್ದೃಷ್ಟಿಗೆ ೧೩೮, ಕ್ಷಪಕ ಶ್ರೇಣಿಯುಳ್ಳವರಿಗೆ ಒಂಬತ್ತನೆಯ ಗುಣಸ್ಥಾನದಲ್ಲಿ ೧೩ ಪ್ರಕೃತಿಗಳ ಸತ್ವ ಇರುತ್ತದೆ. ಆದರೆ ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೩೬ ( ತಿರ್ಯಗ್ಗತಿ ೧,

ತಿರ್ಯಗ್ಗತ್ಯಾನುಪೂರ್ವೀ ೧, ವಿಕಲತ್ರಯದವು ೩, ನಿದ್ರಾ ನಿದ್ರಾ ೧, ಪ್ರಚಲಾ ಪ್ರಚಲಾ ೧, ಸ್ತ್ಯಾನ ಗೃದ್ಧಿ ೧, ಉದ್ಯೋತ ೧, ಆತಪ ೧, ಏಕೇಂದ್ರಿಯ ೧, ಸಾಧಾರಣ ೧, ಸೂಕ್ಷ್ಮ ೧, ಸ್ಥಾವರ ೧, ಅಪ್ರತ್ಯಾಖ್ಯಾನಾವರಣದವು ೪, ಪ್ರತ್ಯಾಖ್ಯಾನಾವರಣದವು ೪, ನೋಕಷಾಯದವು ೯, ಸಂಜ್ವನಕ್ರೋಧ ೧, ಮಾನ ೧, ಮಾಯಾ ೧, ನರಕಗತಿ ೧, ಮತ್ತು ನರಕಗತ್ಯಾನುಪೂರ್ವೀ ೧, ಹೀಗೆ ೩೬ ) ಕಡಿಮೆ ಮಾಡುವದರಿಂದ ಉಳಿಯುವ ೧೦೨ ಪ್ರಕೃತಿಗಳ ಸತ್ವ ಉಳಿಯುತ್ತದೆ.

೬೫೩ ಪ್ರ.—ಹನ್ನೊಂದನೇ ಉಪಶಾಂತಮೋಹನಾಮಕ ಗುಣಸ್ಥಾನದ ಸ್ವರೂಪ ಏನು ಅದೆ?

ಉ.—ಚಾರಿತ್ರಮೋಹನೀಯ ೨೧ ಪ್ರಕೃತಿಯು ಉಪಶಮವಾಗುವದರಿಂದ, ಯಥಾಖ್ಯಾತಚಾರಿತ್ರ ಧಾರಣ ಮಾಡುವ ಮುನಿಗಳಿಗೆ ಈ ಹನ್ನೊಂದನೇ ಉಪಶಾಂತಮೋಹವೆಂಬ ಗುಣಸ್ಥಾಸ ಪ್ರಾಪ್ತವಾಗುತ್ತದೆ. ಈ ಗುಣಸ್ಥಾನದ ಕಾಲವು ಸಮಾಪ್ತವಾದ ಬಳಿಕ ಮೋಹನೀಯ ಕರ್ಮದ ಉದಯದಿಂದ ಜೀವವು ಕೆಳಗಿನ ಗುಣಸ್ಥಾನದಲ್ಲಿ ಇರುತ್ತದೆ.

೬೫೪ ಪ್ರ.—ಹನ್ನೊಂದನೆಯ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತದೆ?

ಉ.—ಹತ್ತನೆಯ ಗುಣಸ್ಥಾನದಲ್ಲಿ ಯಾವ ೧೭ ಪ್ರಕೃತಿಗಳ ಬಂಧವಾಗುತ್ತಿತ್ತೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೧೬ (ಜ್ಞಾನಾವರಣೀಯವು ೫, ದರ್ಶನಾವರಣದವು ೪, ಅಂತರಾಯದವು ೫, ಯಶಃಕೀರ್ತಿ ೧, ಉಚ್ಚಗೋತ್ರ ೧) ಕಡಿಮೆ ಮಾಡುವದರಿಂದ ಉಳಿಯುವ ೧ ಮಾತ್ರ ಸಾತಾವೇದನೀಯ ಪ್ರಕೃತಿಯ ಬಂಧವಾಗುತ್ತದೆ.

೬೫೫ ಪ್ರ.—ಹನ್ನೊಂದನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುತ್ತದೆ?

ಉ.—ಹತ್ತನೆಯ ಗುಣಸ್ಥಾನದಲ್ಲಿ ಯಾವ ೬೦ ಪ್ರಕೃತಿಗಳ ಉದಯವಾಗುತ್ತದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ಸಂಜ್ವಲನಲೋಭ ಎಂಬದನ್ನೊಂದು ಕಡಿಮೆ ಮಾಡುವದರಿಂದ ಉಳಿಯುವ ೫೯ ಪ್ರಕೃತಿಗಳ ಉದಯವಾಗುತ್ತದೆ.

೬೫೬ ಪ್ರ.—ಹನ್ನೊಂದನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವ ಉಳಿಯುತ್ತದೆ?

ಉ.—ಒಂಬತ್ತನೇ ಹಾಗು ಹತ್ತನೇ ಗುಣಸ್ಥಾನಗಳಂತೆ ದ್ವಿತೀಯೋಪಶಮ ಸಮ್ಯಗ್ದೃಷ್ಟಿಗೆ ೧೪೨ ಮತ್ತು ಕ್ಷಾಯಿಕ ಸಮ್ಯಗ್ದೃಷ್ಟಿಗೆ ೧೩೯ ಪ್ರಕೃತಿಗಳ ಸತ್ವ ಉಳಿಯುತ್ತದೆ.

೬೫೭ ಪ್ರ.—ಕ್ಷೀಣಮೋಹನಾಮಕ ಹನ್ನೆರಡನೇ ಗುಣಸ್ಥಾನದ ಸ್ವರೂಪವೇನು? ಮತ್ತು ಅದು ಯಾರಿಗೆ ಆಗುತ್ತದೆ?

ಉ.—ಅತ್ಯಂತವಾಗಿ ಮೋಹನೀಯಕರ್ಮದ ಕ್ಷಯವಾಗುವದರಿಂದ ಸ್ಫಟಿಕಮಣಿ ಪಾತ್ರೆಯೊಳಗಿನ ನೀರಿನಂತೆ ಅತ್ಯಂತ ನಿರ್ಮಲ, ಅವಿನಾಶಿ ಮತ್ತು ಯಥಾಖ್ಯಾತ ಚಾರಿತ್ರವನ್ನು ಧಾರಣಮಾಡುವ ಮುನಿಗಳಿಗೆ ಕ್ಷೀಣಮೋಹವೆಂಬ ಗುಣಸ್ಥಾನವು ಪ್ರಾಪ್ತವಾಗುತ್ತದೆ.

೬೫೮ ಪ್ರ.—ಹನ್ನೆರಡನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತದೆ.

ಉ.—ಸಾತಾವೇದನೀಯ ಪ್ರಕೃತಿಯದೊಂದೇ ಬಂಧವಾಗುತ್ತದೆ.

೬೫೯ ಪ್ರ.—ಹನ್ನೆರಡನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುತ್ತದೆ?

ಉ.—ಹನ್ನೊಂದನೇ ಗುಣಸ್ಥಾನದಲ್ಲಿ ಯಾವ ೫೯ ಪ್ರಕೃತಿಗಳ ಉದಯವಾಗುತ್ತದೋ, ಅವುಗಳೊಳಗಿಂದ ವ್ಯುಚ್ಛಿನ್ನ ಎರಡು ಪ್ರಕೃತಿ (ವಜ್ರನಾರಾಚ ಹಾಗು ನಾರಾಚ) ಕಡಿಮೆ ಮಾಡುವದರಿಂದ ಉಳಿಯುವ ೫೭ ಪ್ರಕೃತಿಗಳ ಬಂಧವಾಗುವದು.

೬೬೦ ಪ್ರ.—ಹನ್ನೆರಡನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವ ಉಳಿಯುತ್ತದೆ?

ಉ.—ಹತ್ತನೇ ಗುಣಸ್ಥಾನದಲ್ಲಿ, ಕ್ಷಪಕಶ್ರೇಣಿಯನ್ನು ಏರುವ ಸಮ್ಯಗ್ದೃಷ್ಟಿಗಳ ಸಂಬಂಧದಿಂದ ೧೦೨ ಪ್ರಕೃತಿಗಳ ಸತ್ವವನ್ನು ಹೇಳಿರುವದು, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ಸಂಜ್ವಲನಲೋಭ ಎಂಬದನ್ನು ಕಡಿಮೆ ಮಾಡುವದರಿಂದ ಉಳಿಯುವ ೧೦೧ ಪ್ರಕೃತಿಗಳ ಸತ್ವ ಉಳಿಯುತ್ತದೆ.

೬೬೧ ಪ್ರ.—ಸಯೋಗಕೇವಲೀನಾಮಕ ೧೩ನೇ ಗುಣಸ್ಥಾನದ ಸ್ವರೂಪವೇನು?

ಉ.—ಘಾತಿಯಾಕರ್ಮದ ೪೭ ಮತ್ತು ಅಘಾತಿಯಾ ಕರ್ಮದ ೧೬ ಹೀಗೆ ಒಟ್ಟಿಗೆ ೬೩ ಪ್ರಕೃತಿಗಳ ಕ್ಷಯ ಆಗುವದರಿಂದ, ಲೋಕಾಲೋಕಪ್ರಕಾಶಕ

ಕೇವಲಜ್ಞಾನ ಮತ್ತು ಮನೋಯೋಗ ವಚನ ಯೋಗ ಕಾಮಯೋಗಗಳನ್ನು ಧಾರಣಮಾಡು ವಂಥ ಅರಹಂತ ಭಟ್ಟಾರಕನಿಗೆ ಸಯೋಗಕೇವಲೀ ಎಂಬ ಹದಿಮೂರನೇ ಗುಣಸ್ಥಾನವು ಪ್ರಾಪ್ತವಾಗುತ್ತದೆ. ಇದನ್ನೇ ಕೇವಲೀ ಭಗವಾನರು ತಮ್ಮ ದಿವ್ಯಧ್ವನಿಯಿಂದ ಭವ್ಯಜೀವಿಗಳಿಗೆ ಉಪದೇಶ ಮಾಡಿ ಸಂಸಾರದಲ್ಲಿ ಮೋಕ್ಷಮಾರ್ಗವನ್ನು ಪ್ರಕಾಶಿತಮಾಡುತ್ತಾರೆ.

೬೬೨ ಪ್ರ.—ಹದಿಮೂರನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತದೆ?

ಉ.—ಹನ್ನೆರಡನೆಯ ಗುಣಸ್ಥಾನದಲ್ಲಿ ಯಾವ ೫೭ ಪ್ರಕೃತಿಗಳ ಉದಯವಾಗುತ್ತದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೧೬ (ಜ್ಞಾನಾವರಣೀಯವು ೫, ಅಂತರಾಯವು ೫, ದರ್ಶನಾವರಣೀಯವು ೪, ನಿದ್ರಾ ಮತ್ತು ಪ್ರಚಲಾ) ಕಡಿಮೆಮಾಡುವದರಿಂದ ೪೧ ಪ್ರಕೃತಿಗಳು ಉಳಿಯುತ್ತವೆ. ಅವುಗಳಲ್ಲಿ ತೀರ್ಥಂಕರರ ಸಂಬಂಧದಿಂದ ಒಂದು ತೀರ್ಥಂಕರರ ಪ್ರಕೃತಿಯನ್ನು ಕೂಡಿಸಬೇಕು, ಅಂದರೆ ೪೨ ಪ್ರಕೃತಿಗಳ ಉದಯವಾಗುತ್ತದೆ.

೬೬೩ ಪ್ರ.—ಹದಿಮೂರನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವ ಉಳಿಯುತ್ತದೆ?

ಉ.— ಹನ್ನೆರಡನೆಯ ಗುಣಸ್ಥಾನದಲ್ಲಿ ಯಾವ ೧೦೧ ಪ್ರಕೃತಿಗಳ ಸತ್ವ ಇರುವದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೧೬ ಕಡಿಮೆ ಮಾಡುವದರಿಂದ ಉಳಿಯುವ ೮೫ ಪ್ರಕೃತಿಗಳ ಸತ್ವ ಉಳಿಯುತ್ತದೆ.

೬೬೪ ಪ್ರ.—ಅಯೋಗ ಕೇವಲೀ ಎಂಬ ಹದಿನಾಲ್ಕನೇ ಗುಣಸ್ಥಾನದ ಸ್ವರೂಪವೇನು ಮತ್ತು ಅದು ಯಾರಿಗೆ ಆಗುತ್ತದೆ?

ಉ.—ಮನವಚಕಾಯುಗಳ ಯೋಗವಿರಹಿತ, ಕೇವಲ ಜ್ಞಾನಯುಕ್ತ ಅರಹಂತಭಟ್ಟಾರಕರಿಗೆ ಹದಿನಾಲ್ಕನೇ ಗುಣಸ್ಥಾನವು ಪ್ರಾಪ್ತವಾಗುತ್ತದೆ. ಈ ಗುಣಸ್ಥಾನದ ಕಾಲವು अ-इ-उ-ऋ-ऌ ಈ ಐದು ಹ್ರಸ್ವಸ್ವರಗಳ ಉಚ್ಚಾರಕ್ಕೆ ಹತ್ತುವಷ್ಟು ಇರುವದು. ತಮ್ಮ ಗುಣಸ್ಥಾನದ ಕಾಲದ ದ್ವಿಚರಮಸಮಯದಲ್ಲಿ, ಸತ್ತೆಯಲ್ಲಿರುವ ೮೫ ಪ್ರಕೃತಿಗಳಲ್ಲಿ ೭೨ ಪ್ರಕೃತಿಗಳ ಹಾಗು ಚರಮಸಮಯದಲ್ಲಿ ೧೩ ಪ್ರಕೃತಿಗಳ ನಾಶಮಾಡಿ ಅರಹಂತ ಭಗವಾನರು ಮೋಕ್ಷಸ್ಥಾನಕ್ಕೆ ಹೋಗುತ್ತಾರೆ.

೬೬೬ ಪ್ರ.—ಹದಿನಾಲ್ಕನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಬಂಧವಾಗುತ್ತದೆ?

ಉ.—ಹದಿಮೂರನೇ ಗುಣಸ್ಥಾನದಲ್ಲಿ ಯಾವ ಒಂದು ಸಾತಾವೇದನೀಯದ ಬಂಧವಾಗುತ್ತಿತ್ತೋ ಅದೇ ಸ್ಥಾನದಲ್ಲಿ ಅದರ ವ್ಯುಚ್ಛಿತ್ತಿಯಾಗುವದರಿಂದ, ಈ ಸ್ಥಳದಲ್ಲಿ ಯಾವ ಪ್ರಕೃತಿಗಳ ಬಂಧವೂ ಆಗುವದಿಲ್ಲ.

೬೬೭ ಪ್ರ.—ಹದಿನಾಲ್ಕನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಉದಯವಾಗುತ್ತದೆ?

ಉ.—ಹದಿಮೂರನೇ ಗುಣಸ್ಥಾನದಲ್ಲಿ ಯಾವ ೪೨ ಪ್ರಕೃತಿಗಳ ಉದಯವಾಗುತ್ತದೋ, ಅವುಗಳೊಳಗಿಂದ ವ್ಯುಚ್ಛಿನ್ನ ಪ್ರಕೃತಿ ೩೦ ( ವೇದನೀಯ ೧, ವಜ್ರವೃಷಭನಾರಾಚಸಂಹನನ ೧, ನಿರ್ಮಾಣ ೧, ಸ್ಥಿರ ೧, ಅಸ್ಥಿರ ೧, ಶುಭ ೧, ಅಶುಭ ೧, ಸುಸ್ವರ ೧, ದುಃಸ್ವರ ೧, ಪ್ರಶಸ್ತವಿಹಾಯೋಗತಿ ೧, ಅಪ್ರಶಸ್ತವಿಹಾಯೋಗತಿ ೧, ಔದಾರಿಕ ಶರೀರ ೧, ಔದಾರಿಕ ಅಂಗೋಪಾಂಗ ೧, ತೈಜಸಶರೀರ ೧, ಕಾರ್ಮಾಣಶರೀರ ೧, ಸಮಚತುರಸ್ರಸಂಸ್ಥಾನ ೧, ನ್ಯಗ್ರೋಧ ೧, ಸ್ವಾತಿ ೧, ಕುಬ್ಜಕ ೧, ವಾಮನ ೧,

ಹುಂಡಕ ೧, ಸ್ಪರ್ಶ ೧, ರಸ ೧, ಗಂಧ ೧, ವರ್ಣ ೧, ಅಗುರುಲಘುತ್ವ ೧, ಉಪಘಾತ ೧, ಪರಘಾತ ೧, ಉಚ್ಛ್ವಾಸ ೧, ಮತ್ತು ಪ್ರತ್ಯೇಕ ೧ ಹೀಗೆ ಮೂವತ್ತು) ಕಡಿಮೆ ಮಾಡುವದರಿಂದ ಉಳಿಯುವ ಹನ್ನೆರಡು (ವೇದನೀಯ ೧, ಮನುಷ್ಯಗತಿ ೧, ಮನುಷ್ಯಾಯು ೧, ಪಂಚೇಂದ್ರಿಯಜಾತಿ ೧, ಸುಭಗ ೧, ತ್ರಸ ೧, ಬಾದರ ೧, ಪರ್ಯಾಪ್ತ ೧, ಆದೇಯ ೧, ಯಶಸ್ಕೀರ್ತಿ ೧, ತೀರ್ಥಕರ ಪ್ರಕೃತಿ ೧ ಮತ್ತು ಉಚ್ಚಗೋತ್ರ ೧) ಪ್ರಕೃತಿಗಳ ಉದಯವಾಗುತ್ತದೆ.

ಪ್ರ.—ಹದಿನಾಲ್ಕನೇ ಗುಣಸ್ಥಾನದಲ್ಲಿ ಎಷ್ಟು ಪ್ರಕೃತಿಗಳ ಸತ್ವವು ಉಳಿಯುತ್ತದೆ?

ಉ.—ಹದಿಮೂರನೇ ಗುಣಸ್ಥಾನದಂತೆ ಈ ಗುಣಸ್ಥಾನದಲ್ಲಿಯೂ ೮೫ ಪ್ರಕೃತಿಗಳ ಸತ್ವವು ಉಳಿಯುತ್ತದೆ. ಆದರೆ ದ್ವಿಚರಮಸಮಯದಲ್ಲಿ ೭೨, ಮತ್ತು ಅಂತಿಮಸಮಯದಲ್ಲಿ ೧೩, ಹೀಗೆ ೮೫ ಪ್ರಕೃತಿಗಳ ಸತ್ವ ನಷ್ಟ ಮಾಡಿ ಅರಹಂತ ಭಗವಾನರು ಮೋಕ್ಷ ಪ್ರಾಪ್ತಮಾಡಿಕೊಳ್ಳುತ್ತಾರೆ.

**ಐದನೆಯ ಅಧ್ಯಾಯ ಸಮಾಪ್ತ.**

---